ಕರ್ನಾಟಕ
ಸ್ಕೌಟ್ ಮತ್ತು ಗೈಡ್



KARNATAKA SCOUT & GUIDE
News Magazine

VOL.2 NOVEMBER 2002 No. 10




His Excellency the Governor of Karnataka Sri T.N. Chaturvedi with Sreeyuths P.G.R. Sindhia, Vice-President BS&G, Karnataka, K.M. Nanjappa, Former Mayor, Bangalore, Kondajji B. Shanmukhappa, State Chief Commissioner and M.G. Bopaiah, State Commissioner (Guides) at the Investiture Ceremony at Raj Bhavan on 7th November 2002.




# KARNATAKA BHARAT SCOUTS & GUIDES

*Completes 85 Years*

# 1917-2002

PUBLICATION OF THE BHARAT SCOUTS AND GUIDES, KARNATAKA





***State Chief Commissioner decorating His Excellency the Governor of Karnataka with Medallion and Scarf***






***His Excellency the Governor of Karnataka released the Foundation Day Flags***



# ಕರ್ನಾಟಕ ಸ್ಕೌಟ್ ಮತ್ತು ಗೈಡ್
# KARNATAKA SCOUT AND GUIDE


## STATE MONTHLY NEWS MAGAZINE

**Vol - 2** **November - 2002** **No.10**




## ಪರಿವಿಡಿ



* It is a man making Religion that we want
* It is a man making Theories that we want
* It is a man making Education allround that we want

***- Swami Vivekananda***

# ರಾಜ್ಯ ಮುಖ್ಯ ಆಯುಕ್ತರ ನುಡಿ

ಆತ್ಮೀಯರೇ,

ಇದು ನವೆಂಬರ್ ತಿಂಗಳು. ಈ ತಿಂಗಳ ಒಂದನೆಯ ದಿನಾಂಕ ಕರ್ನಾಟಕ ರಾಜ್ಯ ರೂಪುಗೊಂಡ ಒಂದು ಐತಿಹಾಸಿಕ ಮಹತ್ವದ ದಿನ. ರಾಜ್ಯದ ಎಲ್ಲೆಡೆ ಕರ್ನಾಟಕ ರಾಜ್ಯೋತ್ಸವ ಆಚರಣೆಯ ಸಂಭ್ರಮ ಸಂತೋಷಗಳ ತಿಂಗಳು ನವೆಂಬರ್. ನಿಮಗೆಲ್ಲ ರಾಜ್ಯೋತ್ಸವದ ಶುಭಾಶಯಗಳು.

ಈ ರಾಜ್ಯೋತ್ಸವದ ಸಂದರ್ಭದಲ್ಲಿ ನಡೆದಿರುವ ನಮ್ಮ ಸ್ಕೌಟ್ ಮತ್ತು ಗೈಡ್ ಚಳವಳಿಯ ಚಟುವಟಿಕೆಗಳು ನನಗೆ ಹರ್ಷ ಮತ್ತು ಅಭಿಮಾನವುಂಟು ಮಾಡಿವೆ. ನಮ್ಮ ರಾಜ್ಯ ಸಂಸ್ಥೆ ಹೊಸ ಉತ್ಸಾಹ ಮತ್ತು ಹೊಸ ಸಂಕಲ್ಪದಿಂದ ಮುನ್ನಡೆಯಲು ಈಚಿನ ಚಟುವಟಿಕೆಗಳು ಒಂದು ಹೊಸ ಭರವಸೆಯನ್ನು ಹುಟ್ಟಿಸಿವೆ. ಆ ಭರವಸೆಯ ಬೆಳಕಾಗಿ ರಾಜ್ಯದ ನಾನಾ ಭಾಗಗಳಲ್ಲಿ ಲಕ್ಷಾಂತರ ಸ್ಕೌಟ್ ಮತ್ತು ಗೈಡ್ ಬಂಧುಗಳು ನನ್ನೊಂದಿಗಿದ್ದಾರೆಂಬುದೇ ನನಗೆ ಸಮಾಧಾನ ತಂದಿದೆ.

ನಾವೆಲ್ಲ ಒಂದು ಮಹತ್ವಪೂರ್ಣ ಮತ್ತು ಪವಿತ್ರವಾದ ಸೇವಾ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿದ್ದೇವೆ. ಈ ಸಂದರ್ಭದಲ್ಲಿ ಜಗತ್ ಪ್ರಸಿದ್ಧ ನಾಟಕಕಾರ, ವಿಚಾರವಾದಿ ಜಾರ್ಜ್ ಬರ್ನಾಡ್ ಷಾ ಅವರ ಮಾತೊಂದು ನೆನಪಿಗೆ ಬರುತ್ತದೆ ''ಇಪ್ಪತ್ತನೆಯ ಶತಮಾನದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಏನಾದರೂ ಮಹತ್ತರವಾದ ಕಾಣಿಕೆ ಸಂದಿದ್ದರೆ ಅದು ಶಿಕ್ಷಣ ಶಾಸ್ತ್ರಜ್ಞರಿಂದಲ್ಲ; ಸ್ಕೌಟ್ ಚಳವಳಿಯ ಸಿಪಾಯಿಗಳಿಂದ'' ತುಂಬ ಅರ್ಥಪೂರ್ಣವಾದ ಮಾತು. ಈ ಮಾತೇ ನಮ್ಮನ್ನು ರೋಮಾಂಚನಗೊಳಿಸುತ್ತದೆ.

ವಾಸ್ತವವಾಗಿ ಸ್ಕೌಟ್ ಮತ್ತು ಗೈಡ್ ಚಳವಳಿಯೇ ಒಂದು ಶಿಕ್ಷಣ. ವ್ಯಕ್ತಿಯಲ್ಲಿ ಮಾನವೀಯ ಮೌಲ್ಯಗಳನ್ನು ಮೈಗೂಡಿಸುವ ಶಿಕ್ಷಣ. ವ್ಯಕ್ತಿಯ ಬದುಕು ಸಮಷ್ಟಿ ಹಿತಕ್ಕೆ ವಿನಿಯೋಗವಾಗಬೇಕೆಂಬುದನ್ನು ತಿಳಿಸುವ ಶಿಕ್ಷಣ. ಸಮುದಾಯದಲ್ಲಿ ಸೌಹಾರ್ದ ವಾತಾವರಣವನ್ನು ಮೂಡಿಸುವ ಶಿಕ್ಷಣ. ಮಾನವ ಮಾನವ ಸಂಬಂಧಗಳನ್ನು ಭಾವನಾತ್ಮಕವಾಗಿ ಬೆಳೆಸುವ ಶಿಕ್ಷಣ. ಸೇವೆಯಲ್ಲಿ ದೈವ ಸಾಕ್ಷಾತ್ಕಾರ ಪಡೆಯುವ ಶಿಕ್ಷಣ.

ಇಂತಹ ಶ್ರೇಷ್ಠ ತತ್ತ್ವಾದರ್ಶದ, ಉನ್ನತ ಧ್ಯೇಯೋದ್ದೇಶದ ಒಂದು ಮಹಾನ್ ಚಳವಳಿಯ ಸದಸ್ಯರಾಗಿ ನಾವು ಅಭಿಮಾನ ಪಟ್ಟುಕೊಳ್ಳಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕರ್ನಾಟಕ ರಾಜ್ಯ ಘಟಕವು ಅಂತಹ ಅಭಿಮಾನದ ಮುನ್ನಡೆಯಲ್ಲಿದೆ ಎಂದು ತಿಳಿಸಲು ನಾನು ಹರ್ಷಿಸುತ್ತೇನೆ.

ಕಳೆದ ತಿಂಗಳ ಅವಧಿಯಲ್ಲಿ ನಮ್ಮ ಸಂಸ್ಥೆಯ ವತಿಯಿಂದ ನಡೆದಿರುವ ಕೆಲವು ಅಭಿಮಾನ ಪೂರ್ಣ ಕಾರ್ಯಕ್ರಮಗಳನ್ನು ನಿಮ್ಮ ಗಮನಕ್ಕೆ ತರಲಿಚ್ಛಿಸುತ್ತೇನೆ. ಗಟ್ಟಿನೆಲದ ಮೇಲೆ ನಾವು ಇಟ್ಟಿರುವ ಹೆಜ್ಜೆಗಳು ಮುಂದಿನ ದಾರಿ ನಡೆಯುವ ಆತ್ಮ ವಿಶ್ವಾಸ ಮೂಡಿಸಿವೆ ಎಂದು ನಾನು ಭಾವಿಸಿದ್ದೇನೆ.

ಇದೇ ಅಕ್ಟೋಬರ್ ತಿಂಗಳ ದಿನಾಂಕ ೧೭ ರಿಂದ ೨೬ರ ವರೆಗೆ ಬೆಸೆಂಟ್ ಪಾರ್ಕಿನಲ್ಲಿ ಹಿಮಾಲಯ ವುಡ್ ಬ್ಯಾಡ್ಜ್ ತರಬೇತಿ ಶಿಬಿರವು ಯಶಸ್ವಿಯಾಗಿ ನಡೆದಿದೆ. ಶಿಬಿರಾರ್ಥಿಗಳಿಗೆ ಈ ತರಬೇತಿ ಹೊಸ ಚೇತನ ನೀಡಿದೆ, ಹೊಸ ಅನುಭವ ನೀಡಿದೆ.

ದಿನಾಂಕ ೨೦-೧೦-೨೦೦೨ರಂದು ಕೇಂದ್ರ ಕಚೇರಿಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರು ಮತ್ತು ಜಿಲ್ಲಾ ಕಾರ್ಯದರ್ಶಿಗಳ ಸಮಾವೇಶ ನಡೆಯಿತು. ಅದೇ ದಿನ ರಾಜ್ಯ ಯೋಜನಾ ಸಮಿತಿ ಸಭೆ ಮತ್ತು ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಹಾಗೂ ಜಿಲ್ಲಾ ಸಂಘಟನಾ ಆಯುಕ್ತರುಗಳ ಸಂಯುಕ್ತ ಸಭೆಯೂ ನಡೆಯಿತು. ಈ ಸಭೆಗಳಲ್ಲಿ ರಾಜ್ಯದ ಸ್ಕೌಟ್ ಮತ್ತು ಗೈಡ್ ಚಳವಳಿಗೆ ಒಂದು ಸಂಘಟಿತ ಚಾಲನೆ ನೀಡಲು ಸಂಕಲ್ಪಮಾಡಲಾಗಿದೆ.

ದಿನಾಂಕ ೭.೧೧.೨೦೦೨ರಂದು ಗೌರವಾನ್ವಿತ ಕರ್ನಾಟಕ ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿ ಅವರು ನಮ್ಮ ರಾಜ್ಯ ಸಂಸ್ಥೆಯ ಪೋಷಕರಾದ ದಿನ. ಅಂದು ರಾಜಭವನದಲ್ಲಿ ರಾಜ್ಯ ಸಂಸ್ಥೆಯ ಪದಾಧಿಕಾರಿಗಳಿಗೆ ಒಂದು ಹೃದಯ ಸ್ಪರ್ಶಿ ಅನುಭವ. ಸನ್ಮಾನ್ಯ ರಾಜ್ಯಪಾಲರು ಸ್ಕೌಟ್ ಮತ್ತು ಗೈಡ್ ಧ್ವಜ ದಿನಾಚರಣೆಯ ಅಂಗವಾಗಿ ಧ್ವಜಗಳನ್ನು ಬಿಡುಗಡೆ ಮಾಡಿ, ನಮ್ಮ ಸಂಸ್ಥೆಗೆ ೧,೦೦೦ ರೂ.ಗಳ ಕೊಡುಗೆ ನೀಡಿ ಶುಭ ಹಾರೈಸಿದರು. ಅದೇ ಸಂದರ್ಭದಲ್ಲಿ ಸ್ಕೌಟ್ ಮತ್ತು ಗೈಡ್ ಮಾಹಿತಿಯನ್ನೊಳಗೊಂಡ ಕೈಪಿಡಿಯೊಂದನ್ನು ಸನ್ಮಾನ್ಯ ರಾಜ್ಯಪಾಲರು ಬಿಡುಗಡೆ ಮಾಡಿ ನಮ್ಮ ಸಂಸ್ಥೆಯ ಚಟುವಟಿಕೆಗಳ ಬಗೆಗೆ ಮೆಚ್ಚುಗೆ ಸೂಚಿಸಿದರು.

ಈ ಸಂಚಿಕೆಯಲ್ಲಿ ರಾಜ್ಯದ ಹೆಮ್ಮೆಯ ಸನ್ಮಾನ್ಯ ಮುಖ್ಯಮಂತ್ರಿಗಳೂ, ನಮ್ಮ ಸಂಸ್ಥೆಯ ಗೌರವಾನ್ವಿತ ಅಧ್ಯಕ್ಷರು ಹೃದಯಸ್ಪರ್ಶಿ ಸಂದೇಶ ನೀಡಿ ಚಳುವಳಿ ರಾಜ್ಯದ ಎಲ್ಲ ಶಾಲೆಗಳಿಗೂ ಹರಡಬೇಕೆಂದು ಸೂಚಿಸಿದ್ದಾರೆ. ಜಿಲ್ಲಾ ಪಂಚಯತ್, ತಾಲ್ಲೂಕು ಹಾಗೂ ಗ್ರಾಮ ಪಂಚಾಯತ್ ಹಾಗೂ ಯುವಜವ ಸೇವೆ ಹಾಗೂ ವಿದ್ಯಾ ಇಲಾಖೆಗಳು ಚಳುವಳಿಯ ಬೆಳವಣಿಗೆಗೆ ಸಂಪೂರ್ಣ ಬೆಂಬಲ ನೀಡಲು ಸೂಚಿಸಿದ್ದಾರೆ. ಸನ್ಮಾನ್ಯ ಮುಖ್ಯಮಂತ್ರಿಗಳಿಗೆ ಸಂಸ್ಥೆಯ ಗೌರವ ಪೂರ್ವ ಕೃತಜ್ಞತೆಗಳು.

ದಿನಾಂಕ ೯.೧೧.೨೦೦೨ ರಂದು ರಾಜ್ಯ ಸಾರಿಗೆ ಇಲಾಖೆಯ ರಾಜಧಾನಿ ಬೆಂಗಳೂರಿನಲ್ಲಿ ಹಮ್ಮಿಕೊಂಡಿದ್ದ ವಾಯುಮಾಲಿನ್ಯ ನಿವಾರಣಾ ಪಾದಯಾತ್ರೆಯಲ್ಲಿ ನಮ್ಮ ಸಂಸ್ಥೆಯ ವತಿಯಿಂದ ೭೦೦ಕ್ಕೂ ಹೆಚ್ಚು ಸ್ಕೌಟ್ ಮತ್ತು ಗೈಡ್ ಮಕ್ಕಳು ಪಾಲುಗೊಂಡಿದ್ದು ಒಂದು ವಿಶೇಷವಾಗಿತ್ತು. ಆ ಬೃಹತ್ ಪಾದಯಾತ್ರಾ ಮೆರವಣಿಗೆಯಲ್ಲಿ ನಮ್ಮ ಮಕ್ಕಳದೇ ಗಮನಾರ್ಹ ಪಾಲಾಗಿತ್ತು.

ಇದೇ ನವೆಂಬರ್ ೧೧ ರಿಂದ ೧೫ರ ವರೆಗೆ ನಡೆದ ರಾಜ್ಯ ಪುರಸ್ಕಾರ ಪೂರ್ವಭಾವಿ ಸಿದ್ಧತಾ ಶಿಬಿರದಲ್ಲಿ ಒಟ್ಟು ೫೨೦ ಸ್ಕೌಟ್ ಮತ್ತು ಗೈಡ್ ವಿದ್ಯಾರ್ಥಿಗಳು ಪಾಲುಗೊಂಡಿದ್ದರು. ಕೊಂಡಜ್ಜಿ ಸ್ಕೌಟ್ ಶಿಬಿರ ಕೇಂದ್ರದಲ್ಲಿ ನಡೆದ ಈ ಶಿಬಿರದ ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದ್ದ ಹರಿಹರ ಕ್ಷೇತ್ರದ ಶಾಸಕರಾದ ಡಾ|| ವೈ. ನಾಗಪ್ಪ ಅವರು, ಕೊಂಡಜ್ಜಿ ಶಿಬಿರ ಕ್ಷೇತ್ರದ ಅಭಿವೃದ್ಧಿಗಾಗಿ ೨.೦೦ ಲಕ್ಷ ರೂ.ಗಳ ಅನುದಾನ ನೀಡುವುದಾಗಿ ಆಶ್ವಾಸನೆ ನೀಡಿದ್ದಾರೆ. ಈ ಔದಾರ್ಯಕ್ಕಾಗಿ ನಾನು ನಮ್ಮ ಸಂಸ್ಥೆಯ ಪರವಾಗಿ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ರಾಜ್ಯ ಪುರಸ್ಕಾರ ಪೂರ್ವಭಾವಿ ಸಿದ್ಧತಾ ಶಿಬಿರದ ಮುಕ್ತಾಯ ಸಮಾರಂಭಕ್ಕೆ ಆಗಮಿಸಿದ್ದ ದಾವಣಗೆರೆ ಜಿಲ್ಲಾ ಪಂಚಾಯತಿ ಅಧ್ಯಕ್ಷರಾದ ಶ್ರೀ ಜಿ. ದ್ಯಾಮಪ್ಪ ಅವರು ಜಿಲ್ಲೆಯ ಆರೂ ತಾಲ್ಲೂಕುಗಳ ಶಾಲಾ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಸಮವಸ್ತ್ರಕ್ಕಾಗಿ ಜಿಲ್ಲಾ ಪರಿಷತ್ ನಿಧಿಯಿಂದ ಒಂದು ಲಕ್ಷ ರೂ.ಗಳ ನೆರವು ಒದಗಿಸುವುದಾಗಿ ಭರವಸೆ ನೀಡಿದ್ದಾರೆ. ಅವರಿಗೂ ರಾಜ್ಯ ಸಂಸ್ಥೆಯ ಪರವಾಗಿ ಕೃತಜ್ಞತೆಗಳು.

ಬೆಸೆಂಟ್ ಪಾರ್ಕಿನಲ್ಲಿ ದಿನಾಂಕ ೧೨.೧೧.೨೦೦೨ ರಿಂದ ೧೬.೧೧.೨೦೦೨ರ ವರೆಗೆ ಆಯುಕ್ತರ ಮೂಲ ತರಬೇತಿ ಶಿಬಿರ ನಡೆದಿದೆ. ಈ ಶಿಬಿರದಲ್ಲಿ ೫೬ ಜನ ನಾಯಕ / ನಾಯಕಿಯರು ಪಾಲುಗೊಂಡು ಪ್ರಯೋಜನ ಪಡೆದಿದ್ದಾರೆ. ಅವರೆಲ್ಲರೂ ಸಂಸ್ಥೆಯ ಚಟುವಟಿಕೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಪ್ರಾರ್ಥಿಸುತ್ತೇನೆ.

ದಿನಾಂಕ ೨೮.೧೧.೨೦೦೨ ರಿಂದ ೨.೧೨.೨೦೦೨ರ ವರೆಗೆ ತಮಿಳುನಾಡಿನ ಕನ್ಯಾಕುಮಾರಿಯಲ್ಲಿ ಹಿಮಾಲಯನ್ ವುಡ್ ಬ್ಯಾಡ್ಜ್‌ಧಾರಿಗಳ ರಾಷ್ಟ್ರೀಯ ಪುನರ್ ಮಿಲನ ಶಿಬಿರವು ನಡೆಯುತ್ತದೆ. ಈ ಪುನರ್ ಮಿನಲದಲ್ಲಿ ಪಾಲ್ಗೊಳ್ಳಲಿರುವ ರಾಜ್ಯದ ೩೦೦ಕ್ಕೂ ಹೆಚ್ಚು ವೃಕ್ಷಮಣಿಧಾರಿಗಳು ಒಂದು ಸಂಕಲ್ಪ ಮಾಡಲು ನನ್ನ ಪ್ರಾರ್ಥನೆ. ತಾವುಗಳೆಲ್ಲಾ ಕಡ್ಡಾಯವಾಗಿ ಶಾಲೆಯಲ್ಲಿ ಅಥವಾ ಮುಕ್ತದಳವಳವನ್ನು ನಡೆಸಿ, ನಿಮ್ಮ ಜ್ಞಾನ ಹಾಗೂ ಅನುಭವವನ್ನು ಸ್ಕೌಟ್ಸ್, ಗೈಡ್ಸ್‌ಗಳಲ್ಲಿ ಹಂಚಿಕೊಳ್ಳಬೇಕಾಗಿ ಪ್ರಾರ್ಥನೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ನಕ್ಷೆಯಲ್ಲಿ ನಮ್ಮ ರಾಜ್ಯ ಸಂಸ್ಥೆ ತನ್ನದೇ ಆದ ಗಣನೀಯ ಸ್ಥಾನಮಾನ ಗಳಿಸಿದ್ದರೂ, ನಾವು ಅಷ್ಟಕ್ಕೆ ತೃಪ್ತಿಪಟ್ಟುಕೊಳ್ಳುವಂತಿಲ್ಲ. ನಮ್ಮ ಚಳವಳಿ ರಾಜ್ಯದ ಎಲ್ಲ ಜಿಲ್ಲೆ ಮತ್ತು ತಾಲೂಕುಗಳಲ್ಲಿ. ಹಾಗೆಯೇ ಗ್ರಾಮ ಮಟ್ಟದಲ್ಲಿ ಇನ್ನೂ ವ್ಯಾಪಕವಾಗಿ ವಿಸ್ತಾರಗೊಳ್ಳಬೇಕಾಗಿದೆ. ಹೆಚ್ಚು ಹೆಚ್ಚು ಶಾಲೆಗಳನ್ನು ವಿಶೇಷವಾಗಿ ತಾಲ್ಲೂಕು ಹಾಗೂ ಗ್ರಾಮೀಣ ಪ್ರವೇಶದ ಯುವ ಸಮುದಾಯವನ್ನು ಈ ಚಳವಳಿಯ ವ್ಯಾಪ್ತಿಗೆ ತರಬೇಕಾಗಿದೆ. ಈ ದಿಸೆಯಲ್ಲಿ ನಮ್ಮ ಸ್ಕೌಟ್ ಮತ್ತು ಗೈಡ್ ಸಂಘಟಕರು ಕೇಂದ್ರೀಕೃತ ಗಮನ ಹರಿಸುತ್ತಾರೆಂದು ಆಶಿಸುತ್ತೇನೆ.

ಮುಂಬರುವ ದಿನಗಳಲ್ಲಿ ನಮ್ಮ ಧ್ಯೇಯ ಸಾಧನೆಯತ್ತ ನಾವೆಲ್ಲರೂ ನಿಷ್ಠೆಯಿಂದ ಸೇವೆ ಸಲ್ಲಿಸೋಣ. ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಇನ್ನೂ ಹೆಚ್ಚಿನ ಕೀರ್ತಿಯ ಗರಿ ಮೂಡಿಸೋಣ.

(ಕೊಂಡಜ್ಜಿ ಬಿ. ಷಣ್ಮುಖಪ್ಪ)
ರಾಜ್ಯ ಮುಖ್ಯ ಆಯುಕ್ತರು

# GOVERNOR INSTALLED AS PATRON
## of Bharat Scouts and Guides, Karnataka




***STATE CHIEF COMMISSIONER ADMINISTERING SCOUT / GUIDE PROMISE TO HIS EXCELLENCY THE GOVERNOR OF KARNATAKA.***

**KS & G NEWS SERVICE**

***Bangalore 7 Nov '2002***

*His Excellency Sri. T.N. CHATURVEDI the Governor of Karnataka was ceremonially inducted as PATRON of the Bharat Scouts and Guides, Karnataka at Raj Bhavan on 7th Nov' 2002 by presenting a Scarf and a Medalian by Sri. Kondajji B. Shanmukhappa, State Chief Commissioner.*

## *BS & G Foundation Day Observed*

*His Excellency the Governor of Karnataka Sri T.N. Chaturvedi released the Foundation Day Flags of the Bharat Scouts and Guides at Raj Bhavan on 7th Nov' 2002.*

*The Governor Contributed Rs. 1,000/- on the occasion for the Flag Day.*

# BROCHURE ON SCOUTING AND GUIDING RELEASED



*Sri. T.N. Chaturvedi, His Excellency the Governor of Karnataka, released the Brouchure.*

*A Brochure highlighting the Fundamentals, What is Scouting and Guiding, Training Programme for Boys and Girls and the History of the Movement was released by His Excellency the Governor of Karnataka at Raj Bhavan on 7th Nov' 2002.*

*This Brochure is brought to the Public by the State Documentation and Information Centre of The Bharat Scouts and Guides, Karnataka with the Support of Smt. Radha Venkatesh, President Guide and Member Sub-Committee, Karnataka Scout and Guide News Magazine.*

*Sri P.G.R. Sindhia, M.L.A. and Vice-President, Bharat Scouts and Guides, Karnataka, Sri K.M. Nanjappa, Former Mayor of Bangalore, Smt. M.G. Bopaiah, State Commissioner (Guides).*

*300 Scouts and Guides with their unit Leaders attended the function. Sri Kondajji B. Shanmukhappa, State Chief Commissioner, welcomed the Governor and the gathering. Prof. M. Suryanarayanappa State Treaserer proposed the Vote of Thanks. A Cultural Programme was also presented by M.E.C. School, Yelahanka, and Pragathi Vidyalaya, Kanakapura. The State Secretary Sri Chinnaswamy Reddy was the master of ceremony.*

# ZILLA PANCHAYATHS, TALUK PANCHAYATHS, TO SUPPORT SCOUTS / GUIDES

## appeal by the Governor of Karnataka

**KS & G NEWS SERVICE**

***Bangalore 7th Nov, 2002***

*Scouting and Guiding in Karnataka I understand has an excellent and exciting record of achievements and Service to the young boys and girls.*

*Having received the Royal Patronage with the Highness himself as the Chief Scout and Yuvaraja as the Chief Cub, Scouting became popular in Schools. and with the Maharani as the Chief Guide, Guiding movement became popular.*

*The Karnataka Bharat Scouts and Guides prides itself with a very useful and revealing record of 85 years. It has over 2.3 lakh Scouts and Guides and boasts itself of the largest uniformed movement among the young boys and girls.*

*One of the earliest Scout Troops I understand began in the Bishop Cotton Boys High School in the year 1909 at Bangalore. Visionaries guided the destiny of this movement right from the beginning and many celebrities have done this sacred task continuously.*

*I understand, by the turn of 2005, the target to reach in terms of Scouts and Guides in Karnataka is around 4 lakhs.*

*I also learn that the Karnataka State Bharat Scouts and Guides have potential and infrastructural facilities to attain this target. The three Campsites viz., Besant park, Doddaballapur, Kondajji near Davanagere and Shanthi Gruha in Bangalore have been hailed as the most precious, well equipped and easily accessible. I understand that no other State in India has such rich, vast and equipped training centers for Scouts and Guides. This fact I understand has been recognised even by the National Headquarters.*

*The Movement owes it, existence and sustenance mostly to volunteers who work with selfless zeal, idealism, sense of service and principles to groom the young boys*

*and girls into useful Citizens of this great country. Professionals who are the core of the movement have their own role to play in achieving qualitative excellence.*

*I understand that regular programmes in Training, conduct of Jamborettes, Cub and Bulbul Utsavs, District and Local Level Rallies, Community Development, Trekking and Adventure Camps are held throughout the year.*

*The most striking feature of Karnataka Scouting and Guiding is reflected in the keen interest shown by and involvement of Hon'ble Members of Parliament, Zilla Panchayaths, Taluk Panchayaths and Voluntary Organisations who support the movement financially. Further, I understand that the Govt. of Karnataka has made reservations for Scouts and Guides (Rajyapuraskar and Rashtrapati Scouts and Guides) in Professional Courses. I understand that in no other State of India, the Scouts and Guides enjoy these unique opportunities. It is a signal and exemplary achievement by the Karnataka Bharat Scouts and Guides.*

*The Movement looks forward for greater involvement of Members of Parliament through 'MPLAD' funds and the increase of reservation of seats in Professional and Technical Courses, consistent with the Constant and ever increasing numbers of President Scouts and Guides in the movement.*

*I am therefore asking the State Government to consider the requests of the Bharat Scouts and Guides, Karnataka to increase the number of seats reserved in Professionals and Medical - Dental Courses consistent with the increase of eligible President Scout / Guide Awardees of the State.*

*I appeal to State Government, Hon'ble Members of Parliament and Zilla Panchayaths and Taluk Panchayath in the State to support the activities of the The Bharat Scouts and Guides, Karnataka in greater measure, so as to bring in more number of young Boys and Girls into the fold of this movement.*

***Knowledge is that alone which enables a man to know himself.***

***- Mahatma Gandhi***

**ಎಸ್.ಎಂ. ಕೃಷ್ಣ**
ಮುಖ್ಯಮಂತ್ರಿ




ಸಿಎಂಪಿ : ಸಂ : 689 : 2002
ಬೆಂಗಳೂರು - 560 001

ದಿನಾಂಕ : 12.11.2002

## ಸಂದೇಶ



ಇಂದು ಇಡೀ ವಿಶ್ವದಲ್ಲಿ ಸಾರ್ವಜನಿಕ ಜೀವನದ ನೆಮ್ಮದಿ ಮತ್ತು ನೈತಿಕ ಮೌಲ್ಯಗಳು ಕುಸಿಯುತ್ತಿರುವ ಒಂದು ಕಳವಳಕಾರಿ ಸನ್ನಿವೇಶದಲ್ಲಿದೆ. ಇದಕ್ಕೆ ಸೂಕ್ತ ಪರಿಹಾರ ಮಾರ್ಗ ಕಂಡು ಕೊಳ್ಳಬೇಕಾದುದು ಇಂದಿನ ಅವಸರದ ಅಗತ್ಯವೆಂದು ನಾನು ಭಾವಿಸಿದ್ದೇನೆ.

ಜನ ಸಮುದಾಯದಲ್ಲಿ ಸಭ್ಯತೆ, ಪ್ರಾಮಾಣಿಕತೆ ಮತ್ತು ಸೇವಾ ಮನೋಭಾವಗಳನ್ನು ನಿರೀಕ್ಷಿಸಬೇಕಾದರೆ, ಬಹುಶಃ ನಾವು ಶಾಲಾ ವಯಸ್ಸಿನ ಹಂತದಲ್ಲೇ ಮಕ್ಕಳಲ್ಲಿ ಆ ಗುಣಗಳು ಮೈಗೂಡುವಂತೆ ಮಾಡಬೇಕಾಗುತ್ತದೆ.

ನಮಗೆಲ್ಲ ತಿಳಿದಿರುವಂತೆ ಮಕ್ಕಳನ್ನು ಶಿಸ್ತಿನ ಮತ್ತು ಹೊಣೆಗಾರಿಕೆಯ ನಾಗರಿಕರನ್ನಾಗಿ ರೂಪಿಸಲು ಇರುವ ಒಂದು ಮಹತ್ವಪೂರ್ಣವಾದ ಚಳವಳಿ ಎಂದರೆ ಸ್ಕೌಟ್ ಮತ್ತು ಗೈಡ್ ಚಳವಳಿ. ಯುವ ಜನಾಂಗದಲ್ಲಿ ಜೀವನ ಶ್ರದ್ಧೆ ಮತ್ತು ನೀತಿ ನಿಯಮಗಳನ್ನು ಬಿತ್ತಿ ಬೆಳೆಯುವ ಒಂದು ಬೃಹತ್ ಸಂಘಟನೆಯಾಗಿದ್ದು. ಈಗ ವಿಶ್ವದ ೨೧೬ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಕ್ರೀಯಾಶೀಲವಾಗಿದೆ. ಈ ಮಹಾಸಂಸ್ಥೆ ಇನ್ನೈದು ವರ್ಷಗಳಲ್ಲಿ ಶತಮಾನೋತ್ಸವವನ್ನು ಆಚರಿಸಲಿದೆ.

ನಮ್ಮ ಕರ್ನಾಟಕದಲ್ಲಿ ೧೯೧೭ ರಷ್ಟು ಹಿಂದೆಯೇ ಆರಂಭವಾದ ಸ್ಕೌಟ್ - ಗೈಡ್ ಚಳವಳಿ ಕಳೆದ ೯ ದಶಕಗಳಿಂದ ನಿರಂತರವಾಗಿ ಅಭಿಮಾನಪೂರ್ಣ ಸೇವೆ ಸಲ್ಲಿಸಿಕೊಂಡು ಬಂದಿದೆ. ನಾನು ಕೂಡ ನನ್ನ ಶಾಲಾ ದಿನಗಳಲ್ಲಿ ಓರ್ವ ಸ್ಕೌಟ್ ವಿದ್ಯಾರ್ಥಿಯಾಗಿದ್ದುದನ್ನು ಸ್ಮರಿಸಿಕೊಳ್ಳಲು ಸಂತೋಷವೆನಿಸುತ್ತದೆ. ಚಿಕ್ಕ ವಯಸ್ಸಿನಲ್ಲೇ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯತೆ, ಸಾಹಸ ಪ್ರೀಯತೆ, ಕ್ರೀಡಾ ಮನೋಭಾವ, ಕ್ರಿಯಾಶೀಲತೆ, ಸಚ್ಚಾರಿತ್ರ್ಯ, ಜೀವನ ಕೌಶಲ್ಯ, ನಾಯಕತ್ವ ಮತ್ತು ಉದಾತ್ತ ಜೀವನ ಮೌಲ್ಯಗಳನ್ನು ಮೈಗೂಡಿಸುವ ಸ್ಕೌಟ್ ಮತ್ತು ಗೈಡ್ ಚಳವಳಿ ನಮ್ಮ ಶಿಕ್ಷಣದ ಅವಿಭಾಜ್ಯ ಅಂಗವಾಗಬೇಕೆಂದು ನಾನು ಅಪೇಕ್ಷಿಸುತ್ತೇನೆ.

ಭವಿಷ್ಯದ ಸಭ್ಯ ಜನಾಂಗವನ್ನು ರೂಪಿಸುವ ದೃಷ್ಟಿಯಿಂದ ನಮ್ಮ ಸರ್ಕಾರ ಈ ಚಳವಳಿಗೆ ಹೆಚ್ಚಿನ ಉತ್ತೇಜನ ನೀಡಬಯಸುತ್ತದೆ. ಈ ಹಿನ್ನೆಲೆಯಲ್ಲಿ ಸಂಬಂಧಪಟ್ಟ ಶಿಕ್ಷಣ ಮತ್ತು ಯುವಜನ ಸೇವಾ ಇಲಾಖೆಗಳು ಅಗತ್ಯ ಗಮನಹರಿಸಬೇಕೆಂದು ಆಶಿಸುತ್ತೇನೆ. ಹಾಗೆಯೇ ನಮ್ಮ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್ ಆಡಳಿತಗಳೂ ವಿಶೇಷ ಆಸಕ್ತಿ ವಹಿಸಿ, ಇದೊಂದು ಮಹತ್ವಪೂರ್ಣ ಸೇವೆಯೆಂದು ಪರಿಗಣಿಸಿ ರಾಜ್ಯದ ಎಲ್ಲ ಶಾಲೆಗಳಲ್ಲೂ ಸ್ಕೌಟ್ ಮತ್ತು ಗೈಡ್ ಘಟಕಗಳು ಅಸ್ತಿತ್ವಕ್ಕೆ ಬರುವಂತೆ ಅಗತ್ಯ ಉತ್ತೇಜನ ನೀಡಬೇಕೆಂದು ಮನವಿಮಾಡಿಕೊಳ್ಳುತ್ತೇನೆ.

ಸ್ಕೌಟ್ ಮತ್ತು ಗೈಡ್ ಚಳವಳಿಯ ಸಂಸ್ಥಾಪಕ ಲಾರ್ಡ್ ಬೇಡನ್ ಪೊವೆಲ್ ಅವರ "ನೀವು ಸದಾ ಸಂತೋಷದಿಂದಿದ್ದು, ಇತರರನ್ನು ಸಂತೋಷದಿಂದ ಇರುವಂತೆ ಮಾಡಿ ಮತ್ತು ನಿಮಗೆ ಒದಗಿ ಬರುವ ಅವಕಾಶಗಳನ್ನು ಪೂರ್ಣವಾಗಿ ಸದುಪಯೋಗಪಡಿಸಿಕೊಳ್ಳಿ" ಎಂಬ ಮಾತಿನ ಸಾರ್ವಕಾಲಿಕ ಪ್ರಸ್ತುತತೆ ಸದಾ ನಮ್ಮ ನೆನಪಿನಲ್ಲಿರಲಿ.

ಗೌರವಾನ್ವಿತ ಸಮಾಜ ನಿರ್ಮಾಣದ ನಮ್ಮ ಕನಸು ನನಸಾಗಲು ಈ ಮಹಾನ್ ಚಳವಳಿಯನ್ನು ವಿಸ್ತರಿಸಲು ಮತ್ತು ಯಶಸ್ವಿಗೊಳಿಸಲು ನಾವೆಲ್ಲ ಶ್ರಮಿಸೋಣ. ವಿಶೇಷವಾಗಿ ಮಕ್ಕಳ ಪೋಷಕರು ಮತ್ತು ಶಾಲಾ ಉಪಾಧ್ಯಾಯರು ಇದನ್ನು ಒಂದು ಪವಿತ್ರ ಕಾರ್ಯವೆಂದು ಪರಿಭಾವಿಸಿ ತಮ್ಮ ಪಾಲಿನ ಕರ್ತವ್ಯ ನಿರ್ವಹಿಸುವಂತಾಗಬೇಕು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಇದುವರೆಗೆ ನಡೆದು ಬಂದಿರುವ ಹಾದಿಯಲ್ಲಿ ಕರ್ನಾಟಕ ರಾಜ್ಯ ಘಟಕ ತನ್ನದೇ ಆದ ವಿಶಿಷ್ಟ ಸ್ಥಾನಮಾನ ಗಳಿಸಿರುವ ಬಗೆಗೆ ನಮಗೆಲ್ಲ ಅಭಿಮಾನವಿರಲಿ. ಈ ಚಳವಳಿಯಲ್ಲಿ ನಮ್ಮ ರಾಜ್ಯ ಘಟಕವು ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಸ್ಕೌಟ್ಸ್ ಮತ್ತು ಗೈಡ್ಸ್ ನಕ್ಷೆಯಲ್ಲಿ ಮತ್ತಷ್ಟು ಉನ್ನತ ಸ್ಥಾನ ಪಡೆಯುವಂತಾಗಲಿ.

ಸ್ಕೌಟ್ ಮತ್ತು ಗೈಡ್ ಚಳವಳಿಯನ್ನು ನಾವು ಬೆಂಬಲಿಸಿ ಅದನ್ನು ಸದೃಢವಾಗಿ ಬೆಳಸಿದೆವೆಂದರೆ, ಒಂದು ಸೌಹಾರ್ದಯುತ ಸಮಾಜ ನಿರ್ಮಾಣಕ್ಕೆ ಭದ್ರ ಅಡಿಪಾಯ ಹಾಕಿದಂತೆ.

ಎಸ್ ಎಂ ಕೃಷ್ಣ

(ಎಸ್.ಎಂ.ಕೃಷ್ಣ)

ಸನ್ಮಾನ್ಯ ಮುಖ್ಯಮಂತ್ರಿಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕದ ಗೌರವಾನ್ವಿತ ಅಧ್ಯಕ್ಷರು.

# ಸಾರಿಗೆ ಇಲಾಖೆ ಹಮ್ಮಿಕೊಂಡಿದ್ದ ವಾಯುಮಾಲಿನ್ಯ ನಿಯಂತ್ರಣ ಪಾದಯಾತ್ರೆಯಲ್ಲಿ ನಗರದ 700 ಸ್ಕೌಟ್, ಗೈಡ್ಸ್ ಮಕ್ಕಳು ಹುಮ್ಮಸ್ಸಿನಿಂದ ಭಾಗವಹಿಸಿದ್ದರು

**ಕೆಎಸ್‌ಜಿ ವಾರ್ತೆಗಳು**

**ಬೆಂಗಳೂರು. ನವೆಂಬರ್ 9, 2002**

*ದಿನಾಂಕ 9.11.2002 ರಂದು ವಿಧಾನ ಸೌಧದ ಮುಂಭಾಗದಲ್ಲಿ ಕರ್ನಾಟಕ ಸರ್ಕಾರದ ಸಾರಿಗೆ ಇಲಾಖೆ ಹಮ್ಮಿಕೊಂಡಿದ್ದ ವಾಯುಮಾಲಿನ್ಯ ನಿಯಂತ್ರಣ 'ಪಾದಯಾತ್ರೆ' ಕಾರ್ಯಕ್ರಮದಲ್ಲಿ ನಗರದ ವಿವಿಧ ಶಾಲೆಗಳಿಂದ 700 ಸ್ಕೌಟ್ ಮತ್ತು ಗೈಡ್ಸ್ ಮಕ್ಕಳು ಭಾಗವಹಿಸಿದ್ದರು.*

*ಈ ಪಾದಯಾತ್ರೆಯನ್ನು ಸಾರಿಗೆ ಇಲಾಖೆ ಸಚಿವರಾದ ಶ್ರೀ ರಮಾನಾಥ ರೈರವರು ಉದ್ಘಾಟಿಸಿ ಪಾದಯಾತ್ರೆಯಲ್ಲಿ ಪಾಲ್ಗೊಂಡಿದ್ದರು. ಈ ಕಾರ್ಯಕ್ರಮ ದಲ್ಲಿ ಶ್ರೀ ಸುರೇಶ್ ಹೆಬ್ಳೀಕರ್ ಪರಿಸರವಾದಿ ಹಾಗೂ ನಟ, ಶ್ರೀ ಟಿ ತಿಮ್ಮೇಗೌಡ ಸಾರಿಗೆ ಆಯುಕ್ತರು, ಡಾ|| ಐ. ದೇವೇಂದ್ರನ್, ಬೆಂಗಳೂರು*



ವಿಧಾನಸೌಧದ ಮುಂಭಾಗದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ವಾಯುಮಾಲಿನ್ಯ ನಿಯಂತ್ರಣ ಪಾದಯಾತ್ರೆಗೆ ಸನ್ನದ್ಧರಾಗಿದ್ದಾರೆ.



ವಾಯುಮಾಲಿನ್ಯ ಪಾದಯಾತ್ರೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು

ವಿಭಾಗೀಯ ಆಯುಕ್ತರು, ಶ್ರೀ ಉಪೇಂದ್ರ ತ್ರಿಪಾಠಿ, ಅಧ್ಯಕ್ಷರು, ಕರ್ನಾಟಕ ವಾಯು ಮಾಲಿನ್ಯ ನಿಯಂತ್ರಣ ಮಂಡಳಿ, ಡಾ|| ಡಿ.ಎಸ್. ಅಶ್ವಥ್ ಜಿಲ್ಲಾಧಿಕಾರಿ ಬೆಂಗಳೂರು ನಗರ, ಶ್ರೀ ಎಂ.ಎಸ್. ರೆಡ್ಡಿ ಹೆಚ್ಚುವರಿ ಪೋಲೀಸ್ ಆಯುಕ್ತರು ಸಂಚಾರ ಮತ್ತು ಶ್ರೀ ಬಿ.ಎನ್. ಗೋಪಾಲಕೃಷ್ಣ ನಿರ್ವಾಹಕ ನಿರ್ದೇಶಕರು ಬಿ.ಎಂ.ಟಿ.ಸಿ. ಇವರುಗಳು ಭಾಗವಹಿಸಿದ್ದರು.

ಶ್ರೀ ಎಂ.ಎ. ಚೆಲ್ಲಯ್ಯ, ಕೇಂದ್ರ ಕಛೇರಿ ಸ್ಥಾನಿಕ ಆಯುಕ್ತರು (ಸಾರ್ವಜನಿಕ ಸಂಪರ್ಕ) ಇವರು ಮೇಲ್ಕಂಡ ಅಧಿಕಾರಿಗಳನ್ನು ಸ್ಕೌಟ್ ಗೈಡ್ಸ್ ಮಕ್ಕಳ ಬಳಿ ಕರೆದುಕೊಂಡು ಬಂದು ಪರಿಚಯಿಸಿದರು. ಮಕ್ಕಳೊಂದಿಗೆ ಮಾತನಾಡಿ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದಕ್ಕಾಗಿ ಮೆಚ್ಚುಗೆ ವ್ಯಕ್ತಪಡಿಸಿದರು. ಈ ಕಾರ್ಯಕ್ರಮಕ್ಕೆ ಸಂಬಂಧಿಸಿದ ಜಾಹಿರಾತು ಹಾಗೂ ಫಲಕಗಳನ್ನು ಹಿಡಿದು, ವಿಧಾನ ಸೌಧ, ಕೆ.ಆರ್. ವೃತ್ತ, ಮೈಸೂರು ಬ್ಯಾಂಕ್ ವೃತ್ತ, ಮೆಜೆಸ್ಟಿಕ್, ಸುಭಾಷ್‌ನಗರ ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ, ಆನಂದರಾವ್ ವೃತ್ತ, ಬಸವೇಶ್ವರ ವೃತ್ತ - ಈ ಮಾರ್ಗವಾಗಿ ವಿಧಾನಸೌಧದ ಆವರಣಕ್ಕೆ ಆಗಮಿಸಿ ಮುಕ್ತಾಯುಗೊಂಡಿತು. ಈ ಕಾರ್ಯಕ್ರಮದಲ್ಲಿ ಸರ್ಕಾರೇತರ ಸಂಸ್ಥೆಗಳು ಸಾರಿಗೆ ವಲಯಕ್ಕೆ ಸಂಬಂಧಿಸಿದ ಸಂಸ್ಥೆಗಳು, ಇತರ ಸ್ವಯಂ ಸೇವಾ ಸಂಸ್ಥೆಗಳು ಮತ್ತು ಶಾಲಾ ಕಾಲೇಜುಗಳಿಂದ ಮಕ್ಕಳು ಪಾಲ್ಗೊಂಡಿದ್ದರು.

ಈ ಕಾರ್ಯಕ್ರಮದಲ್ಲಿ ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ಕೆ. ತಿಮ್ಮಪ್ಪ, ಮಿಸ್. ಪಿ. ಸರೋಜ, ರಾಜ್ಯ ತರಬೇತಿ ಆಯುಕ್ತರಾದ ಶ್ರೀ ನಾರಾಯಣ ಶೆಟ್ಟಿ ಮತ್ತು ನಗರದ ಸ್ಕೌಟ್, ಗೈಡ್ ನಾಯಕ, ನಾಯಕಿಯುರು ಮಕ್ಕಳೊಂದಿಗೆ ಭಾಗವಹಿಸಿದ್ದರು.

**ಬೆಳೆಸಿಕೊಳ್ಳಿ ಪರಿಸರದೊಡನೆ ಪ್ರೇಮ**
**ಅಳಿಸಿರಿ ಮಾಲಿನ್ಯದ ಧೂಮ**

**ಮಾಲಿನ್ಯ ನಿರ್ಮೂಲನದ ಅರಿವು**
**ನಾಗರೀಕರ ಆರೋಗ್ಯಕ್ಕೆ ನೆರವು**

# ಸ್ವತಂತ್ರ ಘಟಕಗಳು, ಸುಸಜ್ಜಿತ ಶಿಬಿರಗಳು

## (ಕೃಷ್ಣರಾಜೇಂದ್ರ ಒಡೆಯರ್ ರಸ್ತೆ, ಕಥೆ ಹೇಳುವ ರಸ್ತೆಗಳು)

- ಸುರೇಶ್ ಮೂನ

ಸ್ಕೌಟ್ ಚಳುವಳಿಯ ಮೂಲ ಧ್ಯೆಯೋದ್ದೇಶಗಳೆಲ್ಲವೂ ಸಂಪೂರ್ಣವಾಗಿ ಕಾರ್ಯ ರೂಪಕ್ಕೆ ಬರಬೇಕಾದರೆ, ಅದಕ್ಕನುಗುಣವಾದ ಶಿಬಿರಗಳಿರಬೇಕು. ನಮ್ಮ ರಾಜ್ಯದಲ್ಲಿ ಅಂತಹ ಮೂರು ಉತ್ತಮ ಶಿಬಿರಗಳಿವೆ.

ದೊಡ್ಡಬಳ್ಳಾಪುರದ ಬಳಿಯಲ್ಲಿ 105 ಎಕರೆಗಳ ವಿಶಾಲವಾದ ನಿವೇಶನವನ್ನು ಬಾಯ್ ಸ್ಕೌಟ್ ಆಫ್ ಮೈಸೂರು ಸಂಸ್ಥೆಗೆ ಸರಕಾರ ನೀಡಿತು. ಈ ನಿವೇಶನವನ್ನು ದೊರಕಿಸುವಲ್ಲಿ ಆಗಿನ ರೆವಿನ್ಯೂ ಕಮೀಷನರ್ ಮತ್ತು ನಂತರ ದಿವಾನರ ಸಚಿವ ಸಂಪುಟದ ಸದಸ್ಯರಾದ ಕೆ.ವಿ. ಅನಂತರಾಮನ್ ನಡೆಸಿದ ಪ್ರಯತ್ನ ಸ್ಮರಣೀಯ 1939 ಏಪ್ರಿಲ್ 15 ರಂದು ಕೆ.ವಿ. ಅನಂತರಾಮನ್‌ರವರು ಶಿಬಿರವನ್ನು ಉದ್ಘಾಟಿಸಿದರು. ಅಂದಿನಿಂದ ವೇಗವಾಗಿ ಪ್ರಗತಿ ಸಾಧಿಸಿದ ಇದು ಭಾರತದಲ್ಲೇ ಅತ್ಯಂತ ಶ್ರೇಷ್ಠ ಶಿಬಿರ ಹಾಗೂ ತರಬೇತಿ ಕೇಂದ್ರ ಎನಿಸಿಕೊಂಡಿದೆ. ರಾಜ್ಯ, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮೇಳಗಳನ್ನು ನಡೆಸುವ ಸಾಮರ್ಥ್ಯ ಪಡೆದಿದೆ. ಎನ್.ಸಿ.ಸಿ., ಎನ್.ಎಸ್.ಎಸ್. ನಂತಹ ಸೇವಾ ಸಂಘಟನೆಗಳೂ ಇದರ ಪ್ರಯೋದ ಪಡೆಯುತ್ತಿವೆ.

ದಾವಣಗೆರೆ ಜಿಲ್ಲೆಯ ಹರಿಹರ ತಾಲೂಕಿನ ಬಳಿಯ ಕೊಂಡಜ್ಜಿ ಗ್ರಾಮದ ಬದಿಯಲ್ಲಿ ಸುಂದರ ಪ್ರಾಕೃತಿಕ ವಾತಾವರಣವುಳ್ಳ ಹಾಗೂ ಸುಸಜ್ಜಿತವಾದ ಇನ್ನೊಂದು ಶಿಬಿರವಿದೆ. 1971ರಲ್ಲಿ ಸರಕಾರ ನೀಡಿದ 80 ಎಕರೆ ಪ್ರದೇಶ ನಿವೇಶನವನ್ನು ಒಂದು ವ್ಯವಸ್ಥಿತ ಶಿಬಿರ ಹಾಗೂ ತರಬೇತಿ ಕೇಂದ್ರವನ್ನಾಗಿ ಮಾರ್ಪಡಿಸಿದ ಶಿಲ್ಪಿ, ರಾಜ್ಯ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಮುಖ್ಯ ಆಯುಕ್ತರಾಗಿ ಸ್ಮರಣೀಯ ಸೇವೆ ಸಲ್ಲಿಸಿದ ಕೊಂಡಜ್ಜಿ ಬಸಪ್ಪನವರು.

ನಗರದ ಹೃದಯ ಭಾಗದಲ್ಲೇ ಪ್ಯಾಲೆಸ್ ರಸ್ತೆಯಲ್ಲಿ ಶಾಂತಿ ಗೃಹವೆಂಬ ಶಿಬಿರವಿದೆ. ಇದೂ ಪ್ರಶಾಂತವಾದ ವಾತಾವರಣ ಹಾಗೂ ವ್ಯವಸ್ಥೆಗಳನ್ನು ಹೊಂದಿದ್ದು ಒಂದು ಉತ್ತಮ ಶಿಬಿರ, ತರಬೇತಿ ಕೇಂದ್ರ ಹಾಗೂ ಮೇಳಗಳ ಸ್ಥಳವಾಗಿದೆ.

ರಾಜ್ಯ ಸ್ಕೌಟ್ ಚಳವಳಿಯ ಮತ್ತೊಂದು ಪ್ರಮುಖ ಅಂಶವೆಂದರೆ ಓಪನ್ ಯೂನಿಟ್ಸ್ ಎಂದು ಕರೆಯಲ್ಪಡುವ ಸ್ವತಂತ್ರ ಘಟಕಗಳು ಸ್ಕೌಟ್‌ನ ಜನಕ, ಬೆಡನ್ ಪೊವೆಲ್‌ರವರು ಈ ಚಳವಳಿ ಶಿಕ್ಷಣ ಸಂಸ್ಥೆಗಳಿಗಷ್ಟೇ ಸೀಮಿತಗೊಳ್ಳದೆ, ವಯೋಮಿತಿಗಳ ಕಟ್ಟುಪಾಡುಗಳಿಲ್ಲದೆ ಸಾರ್ವಜನಿಕರೂ ಇದರಲ್ಲಿ ಪಾಲ್ಗೊಳ್ಳುವಂತೆ ಸ್ವತಂತ್ರ ಘಟಕಗಳನ್ನು ಸ್ಥಾಪಿಸಬಹುದೆಂದು ಆಶಿಸಿದ್ದರು. ಅವರ ಈ ಆಶಯವನ್ನು ಇಡೀ ಭಾರತದಲ್ಲಿ ಪ್ರಪ್ರಥಮವಾಗಿ ಕಾರ್ಯರೂಪಕ್ಕಿಳಿಸಿದ ಕೀರ್ತ ಬೆಂಗಳೂರಿಗೇ ಸಲ್ಲುತ್ತದೆ.

1909ರಲ್ಲೇ ನಗರದ ಬಿಷಪ್ ಕಾಟನ್ ಸ್ಕೂಲ್‌ನಲ್ಲಿ ಸ್ಕೌಟ್ ಪ್ರಾರಂಭಗೊಂಡರೂ ಅದು ಯುರೋಪಿಯನ್ ಬಾಲಕರಿಗೆ ಸೀಮಿತವಾಗಿತ್ತು. 1918ರಲ್ಲಿ ಭಾರತೀಯ ಬಾಲಕರೂ ಈ ಚಳವಳಿಗೆ ಸೇರಬಹುದೆಂಬ ಆದೇಶ ದೊರಕಿದ ಕೂಡಲೇ ನಿವೃತ್ತ ಮಿಲಿಟರಿ ಅಧಿಕಾರಿ ಎನ್.ಸಿ. ಕೇಶವನ್ ಬೆಂಗಳೂರಿನಲ್ಲಿ ಈ ಚಳವಳಿಯನ್ನು ಪ್ರಾರಂಭಿಸಲು ಕರೆಯಿತ್ತರು. ಎಂ.ಎಚ್. ರಾಮಚಂದ್ರರಾವ್

ಎನ್ನುವವರು 1918ರ ಆಗಸ್ಟ್ 21 ರಂದು ಒಂದು ಸ್ವತಂತ್ರ ಘಟಕವನ್ನು ಪ್ರಾರಂಭಿಸಿದರು. ನಂತರ ಅದೇ ವರ್ಷ ಡಿಸೆಂಬರ್ 21 ರಂದು ಇದನ್ನು 21ನೇ ಗ್ರೂಪ್ ಎಂದು ರಿಜಿಸ್ಟರ್ ಮಾಡಿಸಿ 'ಎಸ್.ಆರ್.ಎನ್.ಎಸ್. ಹಿಂದೂ ಎ.ವಿ. ಸ್ಕೂಲ್' ಎಂಬಲ್ಲಿ ಸ್ಕೌಟ್ ಚಟುವಟಿಕೆಗಳನ್ನು ಪ್ರಾರಂಭಿಸಿದರು. ತಿರುನಾರಾಯಣ ಅಯ್ಯಂಗಾರ್ ಎಂಬ ಸ್ಕೌಟ್ ಮಾಸ್ಟರ್ ಸಹಾಯದೊಂದಿಗೆ ಆರು ವರ್ಷಗಳ ಕಾಲ ಇದನ್ನು ನಡೆಸಿದ ಎಂ.ಎಚ್. ರಾಮಚಂದ್ರರಾಯರು, ಕುಪ್ಪುರಾವ್ ಮತ್ತು ಶ್ರೀಕಂಠಯ್ಯ ಎಂಬುವವರ ನೆರವಿನಿಂದ ಸಿದ್ದಿಕಟ್ಟೆ ಲೋಕಲ್ ಸ್ಕೌಟ್ ಅಸೋಸಿಯೇಷನ್ ಎಂಬ ಹೆಸರಿನಿಂದ ಚಟುವಟಿಕೆಗಳನ್ನು ಮುಂದುವರೆಸಿ ನಂತರ ಚಾಮುಂಡಿ ಸ್ಕೌಟ್ಸ್ ಎಂದು ಹೆಸರನ್ನು ಬದಲಾಯಿಸಿದರು. ಇಂದಿಗೂ ಅದೇ ಹೆಸರಿನಿಂದಲೇ ಈ ಘಟಕ ಕಾರ್ಯನಿರ್ವಹಿಸುತ್ತಿದೆ.

1923ರಲ್ಲಿ ಈ ಘಟಕವು ಪೋಷಕರ ಸಮಿತಿಯುನ್ನು ರಚಿಸಿತು. ಈ ಸಮಿತಿಯ ಅಧ್ಯಕ್ಷರಾಗಿದ್ದವರು ಸಿರ್ಸಿ ಆನಂದರಾವ್, ಕೆ. ಚಾಂದ್ರಿ, ಎನ್. ಮಾಧವರಾವ್, ಡಾ|| ವಿ.ಕೆ. ಬಾದಾಮಿ, ಎಚ್.ವಿ. ಕೃಷ್ಣಯ್ಯ, ಎಸ್.ಎ. ಶ್ರೀನಿವಾಸನ್, ಲೋಕಲ್ ಅಸೋಸಿಯೇಷನ್‌ನ ಕಾರ್ಯದರ್ಶಿಯಾಗಿದ್ದ ಮೇಜರ್ ವೈ.ವಿ.ಕೆ. ಮೂರ್ತಿಯವರೂ ಸಹ ಘಟಕದ ಬೆಳವಣಿಗೆಗೆ ಶ್ರಮಿಸಿದರು. ಸ್ವಂತ ಕಚೇರಿಯಿಲ್ಲದ ಘಟಕವು ಸುಬ್ಬಯ್ಯ ಚೆಟ್ಟಿ ಛತ್ರ, ಟಿಪ್ಪೂ ಅರಮನೆ, ಮಲ್ಲೇಶ್ವರದ ನಾರ್ಮಲ್ ಸ್ಕೂಲ್, ಡಾ|| ಬಿ.ವಿ. ಪಾಠಂಕರ್ ಮನೆ, ರೈಲ್ವೆ ಕ್ವಾರ್ಟರ್ಸ್, ಸಿ.ಎಸ್. ಕೃಷ್ಣನ್ ಅವರ ಮನೆ, ಮಲ್ಲೇಶ್ವರಂ ಮಾಧ್ಯಮಿಕ ಶಾಲೆ - ಹೀಗೆ ಸ್ಥಳದಿಂದ ಸ್ಥಳಕ್ಕೆ ವರ್ಗಾಯಿಸುತ್ತಿತ್ತು. ಕೊನೆಗೆ 1940ರಲ್ಲಿ ಮಲ್ಲೇಶ್ವರಂ ಪೋಸ್ಟ್ ಆಫೀಸಿನ ಹಿಂದೆ 50 X 300 ಅಡಿ ಅಳತೆಯ ನಿವೇಶನವೊಂದನ್ನು ಎಂ.ಆರ್. ನರಸಿಂಹ ಅಯ್ಯಂಗಾರ್ ಎಂಬವವರ ಪ್ರಯತ್ನದಿಂದಾಗಿ ಪಡೆಯಲಾಯಿತು. ಘಟಕಕ್ಕಾಗಿ ಒಂದು ಸ್ವಂತ ಕಟ್ಟಡವೂ ನಿರ್ಮಾಣವಾಯಿತು. ಇಡೀ ದೇಶದಲ್ಲೇ ಇಂದಿಗೂ ಸ್ವಂತ ನಿವೇಶನ ಹಾಗೂ ಕಟ್ಟಡವನ್ನು ಹೊಂದಿರುವ ಏಕೈಕ ಸ್ವತಂತ್ರ ಘಟಕವೇ ಈ ಚಾಮುಂಡಿ ಗ್ರೂಪ್ಸ್. ಇದು 1945ರಲ್ಲಿ ಬೆಳ್ಳಿ ಹಬ್ಬವನ್ನು 1970ರಲ್ಲಿ ಚಿನ್ನದ ಹಬ್ಬವನ್ನು, 1981ರಲ್ಲಿ ವಜ್ರ ಮಹೋತ್ಸವವನ್ನು ಆಚರಿಸಿತು.

1972ರಲ್ಲಿ ನಗರ ಪಾಲಿಕೆ 98 X 128 ಅಡಿ ಅಗಲದ ನಿವೇಶನವನ್ನು ದೀರ್ಘಾವಧಿ ಗುತ್ತಿಗೆಯ ಮೇಲೆ ಈ ಘಟಕಕ್ಕೆ ನೀಡಿದೆ. 83 ವರ್ಷಗಳನ್ನು ಕಳೆದಿರುವ ಇದರ ಜ್ಯೂಬಿಲಿ ಹಾಲ್ ಕಟ್ಟಡದ ನಿರ್ಮಾಣವೂ ಪೂರ್ಣಗೊಳ್ಳುತ್ತಿದೆ. ಚಾಮುಂಡಿ ಸ್ಕೌಟ್ಸ್‌ನ ಸ್ಫೂರ್ತಿಯಿಂದಾಗಿ 1931ರಲ್ಲಿ ತುಮಕೂರಿನಲ್ಲಿ ಶ್ರೀ ಹನುಮಾನ್ ಸ್ಕೌಟ್ಸ್, 1940ರಲ್ಲಿ ಮೈಸೂರಿನಲ್ಲಿ ಜಯಾ ಸ್ಕೌಟ್ಸ್ ಹಾಗೂ ಬೆಂಗಳೂರಿನಲ್ಲಿ 1955ರಲ್ಲಿ ಶ್ರೀ ಕೃಷ್ಣಾನಂದ ಸ್ಕೌಟ್ ಎಂಬ ಸ್ವತಂತ್ರ ಘಟಕಗಳೂ ಪ್ರಾರಂಭವಾದವು.

ಈ ಘಟಕದ 83 ವರ್ಷಗಳ ಇತಿಹಾಸದ ಕೆಲವು ಪ್ರಮುಖ ಘಟನೆಗಳು ಹೀಗಿವೆ. 1927-28ರಲ್ಲಿಬೆಂಗಳೂರಿನ ದೊಡ್ಡ ಬೆಂಕಿ ಅನಾಹುತದಲ್ಲಿ ಬೆಂಕಿ ಆರಿಸಲು ನೆರವು. ಸ್ವತಂತ್ರ ಸೇಂಟ್ ಜಾನ್ ಆಂಬುಲೆನ್ಸ್ ಬ್ರಿಗೇಡ್ ಸ್ಥಾಪನೆ. ಇಂಡೋ - ಪಾಕ್ ಹಾಗೂ ಚೈನಾ ಯುದ್ಧದ ಸಮಯದಲ್ಲಿ ಪ್ರಥಮ ಚಿಕಿತ್ಸೆ ಹಾಗೂ ಸಿವಿಲ್ ಡಿಫೆನ್ಸ್ ಕೇಂದ್ರಗಳ ಮೂಲಕ ಸೇವೆ. ಮೈಸೂರು ರಾಜಮನೆತನದ ನೇರ ಪೋಷಣೆ ಪಡೆದುದಲ್ಲದೆ Maharaja's own Troup ಎಂದು ಕರೆಯಲ್ಪಟ್ಟು Maharaja's Flag ಎಂಬ ಪ್ರತಿಷ್ಠಿತ ಪ್ರಶಸ್ತಿಯುನ್ನು ಗಳಿಸಿದ ಹೆಗ್ಗಳಿಕೆ, ವಿಶ್ವ ಸ್ಕೌಟ್ ಮುಖ್ಯಸ್ಥರುಗಳಾದ ವಿಲ್ಸನ್, ಪರ್ಸಿ

ಸಿಬೋಲ್ಡ್‌ರಂತಹವರ ಭೇಟಿ. 50 ವರ್ಷಗಳಿಗೂ ಹೆಚ್ಚು ಕಾಲ ಕಾರ್ಯ ನಿರ್ವಹಿಸಿದುದಕ್ಕಾಗಿ ದೀರ್ಘಾವಧಿ ಸೇವಾ ಪ್ರಶಸ್ತಿ ಎಂಬ ರಾಷ್ಟ್ರ ಪ್ರಶಸ್ತಿಗಳಿಸಿದ ಏಕೈಕ ಘಟಕ. ಹಲವಾರು ರಾಜ್ಯ ಹಾಗೂ ರಾಷ್ಟ್ರೀಯ ಮಟ್ಟದ ಸ್ಪರ್ಧೆಗಳಲ್ಲಿ ಪ್ರಶಸ್ತಿಗಳ ಗಳಿಕೆ. ಇಂದಿಗೂ ಮಲ್ಲೇಶ್ವರದ ಮಾರುಕಟ್ಟೆಯ ಹಿಂಭಾಗದಲ್ಲಿರುವ ಚಾಮುಂಡಿ ಸ್ಕೌಟ್ಸ್ ತನ್ನೆಲ್ಲ ಚಟುವಟಿಕೆಗಳನ್ನು ಮುಂದುವರೆಸಿಕೊಂಡು ಬಂದಿದೆ.

50 ವರ್ಷಕ್ಕೂ ಹೆಚ್ಚು ಸೇವೆ ಸಲ್ಲಿಸಿರುವ ಮತ್ತೊಂದು ಸ್ವತಂತ್ರ ಘಟಕವೆಂದರೆ 15 ಕಂಠೀರವ ಸ್ಕೌಟ್ಸ್ ಗ್ರೂಪ್. 1950ರಲ್ಲಿ ಅಂದಿನ ರಾಜ್ಯ ಶ್ರೇಷ್ಠ ನ್ಯಾಯಾಧೀಶ ವೆಂಕಟಸ್ವಾಮಿ, ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್‌ನ ರಾಷ್ಟ್ರೀಯ ಕಾರ್ಯಾಧ್ಯಕ್ಷರಾಗಿ ನಿವೃತ್ತರಾದ ಸಿದ್ಧಯ್ಯ ಮುಂತಾದರಿಂದ ಇದು ಪ್ರಾರಂಭವಾಯಿತು. 1956ರಲ್ಲಿ ಇದರ ನೇತೃತ್ವವನ್ನು ವಹಿಸಿಕೊಂಡ ಎಂ. ಶ್ರೀನಿವಾಸರವರು ಇಂದಿಗೂ 47 ವರ್ಷಗಳ ದಾಖಲೆಯ ದೀರ್ಘಕಾಲದ ಸೇವೆ ಸಲ್ಲಿಸಿಕೊಂಡು ಬಂದಿದ್ದಾರೆ. 1972ರಲ್ಲಿ ತೇನ್‌ಸಿಂಗ್‌ರವರಿಂದಲೆ ಪರ್ವತಾರೋಹಣ ತರಬೇತಿ ಪಡೆದಿರುವ ಇವರು ವೆಂಕಟರಾಜು, ಶೇಖರ ಮುಂತಾದ ನುರಿತವರೊಂದಿಗೆ ಮಕ್ಕಳ ಕೂಟದ ಆವರಣದಲ್ಲಿ ಸ್ಕೌಟ್ ಮತ್ತು ಗೈಡ್‌ಗಳಿಗೆ ತರಬೇತಿ ನೀಡುತ್ತಿದ್ದಾರೆ. ಈ ಘಟಕವು ಅನೇಕ ಪ್ರಶಸ್ತಿಗಳನ್ನು ಗಳಿಸಿವೆ. ಇದೇ ರೀತಿ 1958ರಲ್ಲಿ ಎಸ್. ಕೃಷ್ಣಾಜಿರಾವ್ ಭೋಸ್ಲೆ ಎಂಬುವರು ಝಾನ್ಸಿ ಸ್ಕೌಟ್ಸ್ ಗ್ರೂಪ್ ಎಂಬ ಸ್ವತಂತ್ರ ಘಟಕವನ್ನು ಪ್ರಾರಂಬಿಸಿ ಚಾಮರಾಜಪೇಟೆಯ ಮೊರಾರ್ಜಿ ದೇಸಾಯಿ ಶಾಲಾ ಆವರಣದಲ್ಲಿ ಇಂದಿಗೂ ಸ್ಕೌಟ್‌ನ ಎಲ್ಲ ಚಟುವಟಿಕೆಗಳನ್ನು ನಡೆಸುತ್ತಿದ್ದಾರೆ. ಇಂದು ಬೆಂಗಳೂರು ಹಾಗೂ ರಾಜ್ಯದ ಅಸಂಖ್ಯಾತ ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಿದೆ.

**- ಕೃಪೆ ಉದಯವಾಣಿ**

*"ನಮ್ಮ ಬೆಂಗಳೂರು", ಜೂನ್ 22, 2002*

## ಸೂಚನೆ

* *2002 - 03ನೇ ಸಾಲಿನಲ್ಲಿ ಈವರೆಗೂ ಮೂಲ ತರಬೇತಿ ಶಿಬಿರಗಳನ್ನು ನಡೆಸದೇ ಇರುವ ಜಿಲ್ಲಾ ಸಂಸ್ಥೆಗಳು ಜಾಗ್ರತೆ ಶಿಬಿರಗಳನ್ನು ನಡೆಸಿ ಜಿಲ್ಲೆಯಲ್ಲಿ ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್ಸ್‌ಗಳ ಸಂಖ್ಯಾ ಬಲ ಹೆಚ್ಚಿಸಲು ಕೋರಲಾಗಿದೆ.*
* *ದಳಗಳ ನೋಂದಣಿ, ನವೀಕರಣ ಶುಲ್ಕವನ್ನು ಸಂಗ್ರಹಿಸಿ ರಾಜ್ಯ ಸಂಸ್ಥೆಗೆ ಪಾವತಿಸಲು ಜಿಲ್ಲಾ ಸಂಸ್ಥೆಗಳಿಗೆ ಸೂಚಿಸಿದೆ.*
* *2002 - 03ನೇ ಸಾಲಿನ ಜಿಲ್ಲಾ ಸಂಸ್ಥೆ ಹಾಗೂ ಸ್ಥಳಿಯ ಸಂಸ್ಥೆಗಳ ನವೀಕರಣ ಶುಲ್ಕವನ್ನು ರಾಜ್ಯ ಸಂಸ್ಥೆಗೆ ಪಾವತಿಸಲು ಕೋರಲಾಗಿದೆ.*

### ರೋವರ್ / ರೇಂಜರ್‌ಗಳಿಗೆ ಸಾಹಸ ಶಿಬಿರ

*ರಾಜ್ಯಮಟ್ಟದ ರೋವರ್ಸ್ / ರೇಂಜರ್ಸ್‌ಗಳ ಸಾಹಸ ಶಿಬಿರವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ ತಟ್ಟೇಕೆರೆಯಲ್ಲಿ (ಕನಕಪುರ ತಾ।।) ದಿನಾಂಕ 15.12.2002 ರಿಂದ 19.12.2002ರ ವರೆಗೆ ಏರ್ಪಡಿಸಲಾಗಿದೆ.*




# ರಾಜ್ಯ ವಾರ್ತೆಗಳು

## ಜಿಲ್ಲಾ ಮುಖ್ಯ ಆಯುಕ್ತರುಗಳು, ಜಿಲ್ಲಾ ಆಯುಕ್ತರುಗಳು ಮತ್ತು ಜಿಲ್ಲಾ ಕಾರ್ಯದರ್ಶಿಗಳ ರಾಜ್ಯ ಮಟ್ಟದ ಸಮಾವೇಶ

ದಿನಾಂಕ 20-10-2002 ರಂದು ರಾಜ್ಯ ಕೇಂದ್ರ ಕಛೇರಿಯಲ್ಲಿ ಮೇಲ್ಕಂಡ ಸಮಾವೇಶ ಏರ್ಪಡಿಸಲಾಯಿತು. ಜಿಲ್ಲೆಗಳ ತರಬೇತಿಗಳು, ಕಾರ್ಯಕ್ರಮ ಯೋಜನೆಗಳು ಇವುಗಳ ಪರಿಶೀಲನೆ ನಡೆಸಲಾಯಿತು. ತಾಲ್ಲೂಕ್ ಪಂಚಾಯತ್, ಜಿಲ್ಲಾ ಪಂಚಾಯತ್ ಅನುದಾನ, ಲೋಕಸಭಾ ಸದಸ್ಯರ ಅನುದಾನ, ರಾಜ್ಯಸಭಾ ಸದಸ್ಯರ ಅನುದಾನ, ಶಾಸಕರ ಅನುದಾನ ಇವುಗಳನ್ನು ಬಳಸಿಕೊಳ್ಳುವ ಬಗ್ಗೆ ಚರ್ಚಿಸಲಾಯಿತು.

## ಸಹಾಯ ರಾಜ್ಯ ಸಂಘಟನ ಆಯುಕ್ತರುಗಳು ಮತ್ತು ಜಿಲ್ಲಾ ಸಂಘಟನ ಆಯುಕ್ತರುಗಳ ವಿಮರ್ಶನ ಸಭೆ :-

ದಿನಾಂಕ 20-10-2002 ರಂದು ರಾಜ್ಯ ಕೇಂದ್ರ ಕಛೇರಿಯಲ್ಲಿ ಮೇಲ್ಕಂಡ ಸಭೆಯನ್ನು ನಡೆಸಲಾಯಿತು. ರಾಜ್ಯ ಯೋಜನೆಗಳ ಬಗ್ಗೆ, ಘಟಕಗಳ ಸಂಖ್ಯೆಯನ್ನು ಹೆಚ್ಚಿಸುವ ಬಗ್ಗೆ ತಾಲ್ಲೂಕು ಹಾಗೂ ಜಿಲ್ಲಾ ಕಾರ್ಯಕ್ರಮಗಳ ಬಗ್ಗೆ ದಳ ನಾಯಕರುಗಳ ಪ್ರಗತಿಪರ ತರಬೇತಿಯ ಬಗ್ಗೆ ವಿಮರ್ಶಿಸಲಾಯಿತು.

## ರಾಜ್ಯ ಯೋಜನ ಸಮಿತಿ ಸಭೆ :-

ದಿನಾಂಕ 20-10-2002 ರಂದು ರಾಜ್ಯ ಕೇಂದ್ರ ಕಛೇರಿಯಲ್ಲಿ ಮೇಲ್ಕಂಡ ಸಭೆ ನಡೆಸಲಾಯಿತು. 2002 ರಿಂದ 2005ರ ವರೆಗೆ ಸಂಸ್ಥೆಯ ಅಭಿವೃದ್ಧಿ ಯೋಜನೆಗಳ ಬಗ್ಗೆ, ಗಣತಿಯ ಬಗ್ಗೆ, ದಳಗಳನ್ನು ಬಲಪಡಿಸುವ ಕಾರ್ಯಕ್ರಮಗಳ ಬಗ್ಗೆ, ದಳ ನಾಯಕರುಗಳ ನೈಪುಣ್ಯತೆಯನ್ನು ಹೆಚ್ಚಿಸುವ ಬಗ್ಗೆ ಚರ್ಚಿಸಲಾಯಿತು.

## ಬೆಸೆಂಟ್ ಪಾರ್ಕ್ ಶಿಬಿರ ಅಭಿವೃದ್ಧಿ ಸಭೆ :-

ದಿನಾಂಕ 25-10-2002 ರಂದು ಮೇಲ್ಕಂಡ ಸಭೆಯು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಅಧ್ಯಕ್ಷತೆಯಲ್ಲಿ ನಡೆಯಿತು. ದೊಡ್ಡಬಳ್ಳಾಪುರ ನಗರಸಭೆಯ ಅಧ್ಯಕ್ಷರಾದ ಶ್ರೀ ಜೆ. ರಾಜೇಂದ್ರರವರು ಸಭೆಯಲ್ಲಿ ಭಾಗವಹಿಸಿದ್ದರು. ಶಿಬಿರದ ಅಭಿವೃದ್ಧಿಯ ಬಗ್ಗೆ ಚರ್ಚೆ ನಡೆದು ಸದಸ್ಯರುಗಳು ಅನೇಕ ಸಲಹೆ ಸೂಚನೆ ನೀಡಿದರು.

## ಜೋಟಾ (JOTA)

ದಿನಾಂಕ 19-10-2002 ಮತ್ತು 20-10-2002 ರಂದು ರಾಜ್ಯ ಕೇಂದ್ರ ಕಛೇರಿ ಆವರಣದಲ್ಲಿ ಜೋಟಾ ನಡೆಯಿತು. ಇವರಲ್ಲಿ 350 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿ ಭಾರತದ ವಿವಿಧ ರಾಜ್ಯಗಳ ಮತ್ತು ವಿಶ್ವದ ವಿವಿಧ ದೇಶಗಳಲ್ಲಿರುವ ಸೋದರ ಸೋದರಿಯರೊಂದಿಗೆ ಹ್ಯಾಮ್ (HAM) ಸಹಾಯದಿಂದ ಸಂಪರ್ಕಿಸಿ ಸಂಭಾಷಣೆ ನಡೆಸಿದರು. ಬೆಂಗಳೂರು ಅಮ್ಯೂಚುರ್ ರೇಡಿಯೋ ಕ್ಲಬ್ VUZARC ಇವರು ಈ ಕಾರ್ಯಕ್ರಮ ನಡೆಸಲು ಪೂರ್ಣ ಸಹಾಕರ ನೀಡಿದರು.



ಜೋಟಾ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು

## ಹಿಮಾಲಯ ವುಡ್ ಬ್ಯಾಡ್ಜ ತರಬೇತಿ ಶಿಬಿರ

ದಿನಾಂಕ 17-10-2002 ರಿಂದ 26-10-2002ರ ವರೆಗೆ ಬೆಸೆಂಟ್ ಪಾರ್ಕಿನಲ್ಲಿ ಸ್ಕೌಟ್ ಶಿಕ್ಷಕರಿಗೆ, ಕಬ್ ಶಿಕ್ಷಕರಿಗೆ ರಾಜ್ಯ ಮಟ್ಟದ ಹಿಮಾಲಯ ವುಡ್ ಬ್ಯಾಡ್ಜ ತರಬೇತಿ ಶಿಬಿರ ನಡೆಯಿತು. ಸ್ಕೌಟ್ ವಿಭಾಗದಲ್ಲಿ 19 ಮಂದಿ, ಕಬ್ ವಿಭಾಗದಲ್ಲಿ 12 ಮಂದಿ ಶಿಬಿರಾರ್ಥಿಗಳಿದ್ದರು. ಶ್ರೀ ಚಿನ್ನಸ್ವಾಮಿ ರೆಡ್ಡಿಯವರು ಸ್ಕೌಟ್ ವಿಭಾಗದ ಮತ್ತು ಶ್ರೀಮತಿ ಹೇಮಾವಿಜಯಕುಮಾರ ಅವರು ಕಬ್ ವಿಭಾಗದ ನಾಯಕತ್ವ ವಹಿಸಿದ್ದರು. ದಿನಾಂಕ 25-10-2002 ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಮುಖ್ಯ ಅತಿಥಿಗಳಾಗಿದ್ದರು. ರಾಜ್ಯ ಖಜಾಂಚಿಗಳಾದ ಪ್ರೊ। ಎಮ್. ಸೂರ್ಯನಾರಾಯಣಪ್ಪ, ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಆರ್. ವೆಂಕಣ್ಣ, ರಾಜ್ಯ ಆಯುಕ್ತರಾದ ಶ್ರೀಮತಿ ಎಮ್.ಜಿ. ಬೋಪಯ್ಯ, ಕೇಂದ್ರ ಸ್ಥಾನೀಯ ಆಯುಕ್ತರಾದ ಶ್ರೀ ಎಸ್. ಪಾಲ್‌ರಾಜ್, ಮಾಜಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಟಿ.ಎಸ್. ಲೂಕಾಸ್ ಇವರುಗಳು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ಎಸ್. ಶಾಂತಿಮತಿ ಅವರು ವಂದಿಸಿದರು.

## ಬೆಸೆಂಟ್ ಪಾರ್ಕ್‌ನಲ್ಲಿ ರಾಜ್ಯಮಟ್ಟದ ವಯಸ್ಕ ನಾಯಕರ ತರಬೇತಿ ಶಿಬಿರಗಳು

### ರೋವರ್ ಲೀಡರ್‌ಗಳ ಮೂಲ ತರಬೇತಿ

ದಿನಾಂಕ 7.11.2002 ರಿಂದ 16.11.2002ರ ವರೆಗೆ ಬೆಸೆಂಟ್ ಪಾರ್ಕ್‌ನಲ್ಲಿ ರೋವರ್ ಲೀಡರ್‌ಗಳ ಮೂಲ ತರಬೇತಿ ಶಿಬಿರ ನಡೆಯಿತು. ಶ್ರೀ ಸುಬ್ರಮಣ್ಯ ಶಾಸ್ತ್ರಿ ಎಎಲ್‌ಟಿ (ರೋವರ್) ನಾಯಕರಾಗಿದ್ದು, ಶಿಬಿರದಲ್ಲಿ 12 ಶಿಬಿರಾರ್ಥಿಗಳು ಭಾಗವಹಿಸಿದ್ದರು.

### ಆಯುಕ್ತರುಗಳ ಮೂಲ ತರಬೇತಿ ಶಿಬಿರ

ದಿನಾಂಕ 12.11.2002 ರಿಂದ 16.11.2002ರ ವರೆಗೆ ಬೆಸೆಂಟ್ ಪಾರ್ಕ್‌ನಲ್ಲಿ ಆಯುಕ್ತರ ಮೂಲ ತರಬೇತಿ ಶಿಬಿರ ನಡೆಯಿತು. 30 ಜನ ಪುರುಷ ಅಭ್ಯರ್ಥಿಗಳು 26 ಜನ ಮಹಿಳಾ ಅಭ್ಯರ್ಥಿಗಳು ಒಟ್ಟು 56 ಜನ ಕರ್ನಾಟಕದ 22 ಜಿಲ್ಲೆಗಳಿಂದ ಆಗಮಿಸಿದ್ದರು. ಮಿಸ್. ಪಿ. ಸರೋಜ ಎಲ್.ಟಿ.(ಜಿ) ನಾಯಕಿಯಾಗಿದ್ದರು. ಶ್ರೀ ನಾರಾಯಣಶೆಟ್ಟಿ ಎಸ್.ಟಿ.ಸಿ.(ಎಸ್) ಶ್ರೀಮತಿ ಜಾನಕಿ ವೇಣುಗೋಪಾಲ್ ಎಸ್.ಟಿ.ಸಿ.(ಜಿ) ಶ್ರೀಮತಿ ಸುಶೀಲಾ ಗೋಪಾಲ್ ಸಹಾಯಕರಾಗಿದ್ದರು.

ಶ್ರೀ ಚಿನ್ನಸ್ವಾಮಿ ರೆಡ್ಡಿ ರಾಜ್ಯ ಕಾರ್ಯದರ್ಶಿ, ಶ್ರೀ ಟಿ.ಎಸ್. ಲೂಕಾಸ್ ಎಲ್.ಟಿ.(ಎಸ್) ಮತ್ತು ಶ್ರೀಮತಿ ಎಸ್.ಕೆ. ಪ್ರಭ ಎ.ಎಲ್.ಟಿ.(ಜಿ) ಇವರುಗಳು ಸಂಪನ್ಮೂಲ ವ್ಯಕ್ತಿಗಳಾಗಿ ಆಗಮಿಸಿದ್ದರು.

### ❀ ನಕಾಶೆ ಮತ್ತು ಪ್ರಥಮ ಚಿಕಿತ್ಸೆ ಶಿಬಿರ

ದಿನಾಂಕ12.11.2002ರಿಂದ16.11.2002ರವರೆಗೆ ಬೆಸೆಂಟ್ ಪಾರ್ಕ್‌ನಲ್ಲಿನಕಾಶೆ ಮತ್ತುಪ್ರಥಮ ಚಿಕಿತ್ಸೆಶಿಬಿರ ನಡೆಯಿತು. 28. ಜನ ವುಡ್ ಬ್ಯಾಡ್ಜ್‌ಧಾರಕರು ಭಾಗವಹಿಸಿದ್ದು ಶ್ರೀ ಕೃಷ್ಣೋಜಿರಾವ್ ಭೋಸ್ಲೆ, ಎ.ಎಲ್.ಟಿ.(ಎಸ್) ಇವರು ನಾಯಕರಾಗಿದ್ದರು.

ಸರ್ವೆ ಆಫ್ ಇಂಡಿಯಾದಿಂದ ಶ್ರೀ ರವೀಂದ್ರ ಹಾಗೂ ಶ್ರೀ ಶಿವದಾಸ್ ಇವರುಗಳನ್ನು ಸಂಪನ್ಮೂಲ ವ್ಯಕ್ತಿಗಳಾಗಿ ನಿಯೋಜಿಸಲ್ಪಟ್ಟಿದ್ದರು. ಸೆಂಟ್ ಜಾನ್ ಅಂಬುಲೆನ್ಸ್ ಅಸೋಶಿಯೇಷನ್ನಿನಿಂದ ಶ್ರೀ ವಿ. ಆನಂದ್ ಇವರನ್ನು ಪ್ರಥಮ ಚಿಕಿತ್ಸೆಗೆ ಸಂಪನ್ಮೂಲ ವ್ಯಕ್ತಿಗಳಾಗಿ ನಿಯೋಜಿಸಲ್ಪಟ್ಟಿದ್ದರು.

ದಿನಾಂಕ 12.11.2002 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಅಧ್ಯಕ್ಷತೆ ವಹಿಸಿ ಮೇಲ್ಕಂಡ ಮೂರು ಶಿಬಿರಗಳ ಅಭ್ಯರ್ಥಿಗಳನ್ನುದ್ದೇಶಿಸಿ ಮಾತನಾಡಿ ಶುಭ ಕೋರಿದರು. ರಾಜ್ಯ ಖಜಾಂಚಿಗಳಾದ ಪ್ರೊ. ಎಂ. ಸೂರ್ಯ ನಾರಾಯಣಪ್ಪನವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ದಿನಾಂಕ 15.11.2002 ರಂದು ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್) ಗಳಾದ ಶ್ರೀಮತಿ ಶಾಂತಿಮತಿ ಅವರು ಭವ್ಯ ಶಿಬಿರಾಗ್ನಿಯನ್ನು ಉದ್ಘಾಟಿಸಿ ಶುಭ ಕೋರಿದರು. ದಿನಾಂಕ 16.11.2002 ರಂದು ಮೂರು ಶಿಬಿರಗಳು ಮುಕ್ತಾಯಗೊಂಡವು.

**ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಂತಹ ಮಕ್ಕಳಿರಲೆಂದು ಹಾರೈಸುತ್ತೇವೆ.**

*- ಮಹಾತ್ಮಗಾಂಧಿ.*

**"ಪ್ರತಿಯೊಬ್ಬ ಹುಡುಗ ಮತ್ತು ಹುಡುಗಿಯೂ ಒಬ್ಬ ಸ್ಕೌಟ್ ಮತ್ತು ಗೈಡ್ಸ್ ಆಗಬೇಕೆಂಬುದು ನನ್ನ ಅಭಿಪ್ರಾಯ. ಹುಡುಗ - ಹುಡುಗಿಯರು ತಮ್ಮ ಚಿಕ್ಕ ವಯಸ್ಸಿನಲ್ಲಿ ಹೆಚ್ಚು ಕಲಿಯಬಲ್ಲರೆಂಬುದರಲ್ಲಿ ಸಂಶಯವೇ ಇಲ್ಲ. ತರಗತಿಯ ಕೋಣೆಯಲ್ಲೇ ಮತ್ತು ಪುಸ್ತಕಗಳಿಂದಲೇ ಎಲ್ಲವನ್ನು ಕಲಿಯಲು ಸಾಧ್ಯವಾಗದು. ಈ ವಿಶಾಲ ವಿಶ್ವದಲ್ಲಿ ಹೊರಗೆ ಕಲಿಯುವುದು ಬಹಳಷ್ಟಿದೆ"**

*- ಜವಹರಲಾಲ್ ನೆಹರು*

**ರಾಷ್ಟ್ರೀಯ ಸೇವೆಯ ಆದರ್ಶವನ್ನು ಪ್ರಸಾರಗೊಳಿಸಲು ಸ್ಕೌಟ್ ಮತ್ತು ಗೈಡ್ಸ್ ಚಳವಳಿ ಬಹಳಷ್ಟು ಕೆಲಸ ಮಾಡಿದೆ.**

*- ಇಂದಿರಾಗಾಂಧಿ*

# ಕೊಂಡಜ್ಜಿಯಲ್ಲಿ ರಾಜ್ಯ ಪುರಸ್ಕಾರ ಪೂರ್ವಭಾವಿ ಸಿದ್ಧತಾ ಶಿಬಿರದಲ್ಲಿ ೫೨೦ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಭಾಗವಹಿಸಿದರು.

ದಿನಾಂಕ 11.11.2002 ರಿಂದ 15.11.2002ರ ವರಗೆ ಕೊಂಡಜ್ಜಿ ಬಸವಪ್ಪ ಸ್ಕೌಟ್ಸ್ - ಗೈಡ್ಸ್ ತರಬೇತಿ ಕೇಂದ್ರ ಕೊಂಡಜ್ಜಿಯಲ್ಲಿ ರಾಜ್ಯ ಮಟ್ಟದ ಪುರಸ್ಕಾರ ಪೂರ್ವಭಾವಿ ಸಿದ್ಧತಾ ಶಿಬಿರ ನಡೆಯಿತ್ತು.

ಈ ತರಬೇತಿಯಲ್ಲಿ ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳಿಂದ 520 ಸ್ಕೌಟ್ಸ್ - ಗೈಡ್ಸ್ ವಿದ್ಯಾರ್ಥಿಗಳು ಭಾಗವಹಿಸಿರುತ್ತಾರೆ. ಶಿಬಿರದ ಸ್ಕೌಟ್ಸ್ ವಿಭಾಗಕ್ಕೆ ನಾಯಕರಾಗಿ ಶ್ರೀವಮಾನ್ ಎಂ.ಪಿ. ಚಂದ್ರಪ್ಪನವರು, ಗೈಡ್ಸ್ ವಿಭಾಗಕ್ಕೆ ನಾಯಕಿಯರಾಗಿ ಶ್ರೀಮತಿ ಸುಶೀಲಾ ಚಿಂಗಪ್ಪನವರು ಕಾರ್ಯಕ್ರಮದಲ್ಲಿ ಕಾರ್ಯನಿರ್ವಹಿಸಿದರು.

ಈ ಶಿಬಿರದಲ್ಲಿ ಸಮಪರ್ಕವಾಗಿ ಪಾಠ ಪ್ರವಚನಗಳಾದ, ಗಂಟುಗಳು, ಪ್ರಥಮ ಚಿಕಿತ್ಸೆ, ಕಟ್ಟುಗಳು, ಅಂದಾಜು ಮಾಡುವುದು, ಸಂಕೇತಗಳು, ಪ್ರಾವೀಣ್ಯತೆ, ಅರ್ಹತಾ ಪದಕಗಳು, ಸಮಾಜ ಸೇವಾ ಕಾರ್ಯಗಳು ಹಾಗೂ ರಾಜ್ಯ ಪುರಸ್ಕಾರಕ್ಕೆ ಸಂಬಂಧ ಪಟ್ಟ ಎಲ್ಲಾ ವಿಷಯಗಳಿಗೂ ತರಬೇತಿ ನೀಡಲಾಯಿತು.



ಶಿಬಿರದಲ್ಲಿ ಸ್ವಚ್ಛತಾ ಕಾರ್ಯಕ್ರಮದಲ್ಲಿ ಗೈಡ್ಸ್‌ಗಳು

## ಕೊಂಡಜ್ಜಿ ಬಸಪ್ಪನವರ ೨೦ನೇ ಸ್ಮರಣೋತ್ಸವ



ಕೊಂಡಜ್ಜಿ ಬಸಪ್ಪನವರ ಸಮಾಧಿಯ ಬಳಿ ಸ್ಕೌಟ್ ಮತ್ತು ಗೈಡ್ಸ್‌ಗಳು

ದಿನಾಂಕ 14.11.2002 ರಂದು ಬೆಳಿಗ್ಗೆ 7.30 ಗಂಟೆಗೆ ಸರ್ವಧರ್ಮ ಪ್ರಾರ್ಥನಾ ಕಾರ್ಯಕ್ರಮದಲ್ಲಿ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ಅಧ್ಯಕ್ಷತೆ ವಹಿಸಿದ್ದರು. ಪ್ರೊ।। ಎಂ. ಸೂರ್ಯನಾರಾಯಣಪ್ಪನವರು ರಾಜ್ಯ ಖಜಾಂಚಿ ಕೊಂಡಜ್ಜಿ ಬಸಪ್ಪನವರ ಬಗ್ಗೆ ಮಾತನಾಡಿದರು. ಶ್ರೀ ನಾರಾಯಣರಾವ್ ಮಾನೆ ಪ್ರಾರ್ಥನಾ ಗೀತೆಗಳನ್ನು ಹಾಡಿದರು.

ಈ ಕಾರ್ಯಕ್ರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಮತ್ತು ನಾಯಕರುಗಳು ಭಾಗವಹಿಸಿದರು. ಶ್ರೀ ಕೆ. ತಿಮಪ್ಪ, ರಾಜ್ಯ ಸಂಘಟನ ಆಯುಕ್ತರು (ಸ್ಕೌಟ್ಸ್), ಶ್ರೀ ಎಂ.ಎ. ಚೆಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು (ಸಾರ್ವಜನಿಕ ಸಂಪರ್ಕ) ಮತ್ತು ಶ್ರೀಮತಿ ಕೆ.ಕೆ. ಲೀಲಾ, ಸಹಾಯಕ ಸಂಘಟನ ಆಯುಕ್ತರು (ಗೈಡ್ಸ್) ಇವರುಗಳು ಕ್ಯಾಂಪಿನ ಯಶ್ಸಸಿಗೆ ಪಾತ್ರರಾಗಿದ್ದರು.

# ಹರಿಹರ ಶಾಸಕ ಡಾ|| ವೈ. ನಾಗಪ್ಪನವರು
# ಕೊಂಡಜ್ಜಿ ತರಬೇತಿ ಕೇಂದ್ರ ಅಭಿವೃದ್ಧಿಗೆ ಎರಡು ಲಕ್ಷ ಅನುದಾನ ಘೋಷಣೆ



ದಾವಣಗೆರೆ ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ಬಸವರಾಜಪ್ಪ, ಶ್ರೀ ಹನಗವಾಡಿ ವಿರುಪಾಕ್ಷಪ್ಪ, ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀ ಜಿ. ದ್ಯಾಮಪ್ಪ, ಹರಿಹರ ಶಾಸಕರಾದ ಡಾ|| ವೈ. ನಾಗಪ್ಪ, ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಮತ್ತು ಶ್ರೀ ಕೆ.ಬಿ. ರಾಮಲಿಂಗಪ್ಪ ಇವರುಗಳನ್ನು ಚಿತ್ರದಲ್ಲಿ ನೋಡಬಹುದು.

## ಕೆಎಸ್‌ಜಿ ವಾರ್ತೆಗಳು

ಕೊಂಡಜ್ಜಿ, ನ. 14 - ಡಾ|| ವೈ. ನಾಗಪ್ಪ ಶಾಸಕರು ಹರಿಹರ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ನಡೆದ ರಾಜ್ಯ ಪುರಸ್ಕಾರ ಸ್ಕೌಟ್ಸ್ ಗೈಡ್ಸ್‌ಗಳ ರಾಜ್ಯಮಟ್ಟದ ಪೂರ್ವಭಾವಿ ತರಬೇತಿ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಿದ್ದರು.

ನಾನೂ ಒಬ್ಬ ಸ್ಕೌಟ್ ವಿದ್ಯಾರ್ಥಿಯಾಗಿದ್ದೆ ಎಂದು ಹೆಮ್ಮೆಯಿಂದ ತಿಳಿಸಿದ ಅವರು, ಸ್ಕೌಟ್ಸ್ ಸಂಸ್ಥೆಗೆ ಮುಂದಿನ ವರ್ಷದ ಅನುದಾನದಲ್ಲಿ ಎರಡು ಲಕ್ಷ ರೂ.ಗಳನ್ನು ನೀಡುವುದಾಗಿ ಭರವಸೆ ನೀಡಿದರು.

ಜಾತ್ಯಾತೀತ ಭಾವನೆ, ಸಹೋದರತ್ವ ಗುಣವನ್ನು ಮೈಗೂಡಿಸಿಕೊಳ್ಳಬೇಕೆಂದು ಕರೆ ನೀಡಿದ ಅವರು, ನಾವೆಲ್ಲಾ ಒಂದೇ ದೇಶದ ಮಕ್ಕಳು ಎಂಬುದನ್ನು ಮನಗಾಣಬೇಕೆಂದು ತಿಳಿಸಿದರು.

ನನ್ನ ಜೀವನಕ್ಕೆ ಹೊಸ ತಿರುವು ನೀಡಿದವರು ಕೊಂಡಜ್ಜಿ ಬಸಪ್ಪನವರೆಂದು ಕೃತಜ್ಞತೆ ವ್ಯಕ್ತಪಡಿಸಿದ ಅವರು, ವೈದ್ಯಕೀಯ ಕಾಲೇಜಿನಲ್ಲಿ ನನಗೆ ಸೀಟು ಕೊಡಿಸಲು ಕೊಂಡಜ್ಜಿ ಬಸಪ್ಪನವರು ಶ್ರಮಿಸಿದರೆಂದು ನೆನಪು ಮಾಡಿಕೊಂಡರು.

# ಸ್ಕೌಟ್ಸ್ ಮತ್ತು ಗೈಡ್ಸ್ ಸಮವಸ್ತ್ರಕ್ಕೆ ಒಂದು ಲಕ್ಷ ರೂಪಾಯಿ

## - ಶ್ರೀ ಜಿ. ದ್ಯಾಮಪ್ಪ, ಅಧ್ಯಕ್ಷರು ದಾವಣಗೆರೆ ಜಿಲ್ಲಾ ಪಂಚಾಯಿತ್

**ಕೆಎಸ್‌ಜಿ ವಾರ್ತೆಗಳು**

ಕೊಂಡಜ್ಜಿ, ನ. 14 - ಮುಖ್ಯ ಅತಿಥಿಗಳಾಗಿ ಆಗಮಿನಿಸಿದ್ದ ದಾವಣಗೆರೆಯ ಜಿಲ್ಲಾ ಪಂಚಾಯಿತ್ತಿ ಅಧ್ಯಕ್ಷ ಜಿ. ದ್ಯಾಮಪ್ಪ ಅವರು, ಜಿಲ್ಲೆಯ 6 ತಾಲ್ಲೂಕುಗಳ ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಸಮವಸ್ತ್ರಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ನೀಡಲಾಗುವುದೆಂದು ರಾಜ್ಯ ಪುರಸ್ಕಾರ ಪೂರ್ವಭಾವಿ ತರಬೇತಿ ಶಿಬಿರ ಮುಕ್ತಾಯ ಸಮಾರೋಪ ಸಮಾರಂಭದಲ್ಲಿ ಪ್ರಕಟಿಸಿದರು.

ಈ ಸಮಾರಂಭದಲ್ಲಿ ದಾವಣಗೆರೆ ಜಿಲ್ಲಾ ಪಂಚಾಯತ್ ಸದಸ್ಯರಾದ ಹನಗವಾಡಿ ವಿರುಪಾಕ್ಷಪ್ಪ, ತುರ್ಚಘಟ್ಟದ ಬಸವರಾಜಪ್ಪ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕ ಶ್ರೀ ಕೆ.ಬಿ. ರಾಮಲಿಂಗಪ್ಪ ಇವರುಗಳು ಮಾತನಾಡಿದರು.

ಇದೇ ಸಂದರ್ಭದಲ್ಲಿ ದಿ|| ನರನಹಳ್ಳಿ ಗುರುಸ್ವಾಮಿಯವರ ಉಗ್ರಾಣದ ಕಟ್ಟಡವನ್ನು ಡಾ|| ವೈ ನಾಗಪ್ಪನವರು ಉದ್ಘಾಟಿಸಿದರು. ಅವರ ಧರ್ಮಪತ್ನಿ ಅಂಬುಜಮ್ಮನವರನ್ನು ಸನ್ಮಾನಿಸಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ ಷಣ್ಮುಖಪ್ಪನವರು ಈ ಕಾರ್ಯಕ್ರಮದಲ್ಲಿ ಸ್ವಾಗತ ಭಾಷಣ ಮಾಡಿದರು. ಶ್ರೀ ಚಿನ್ನಸ್ವಾಮಿ ರೆಡ್ಡಿ ರಾಜ್ಯ ಕಾರ್ಯದರ್ಶಿ ಮುಕ್ತಾಯ ಭಾಷಣ ಮಾಡಿದರು.



ಹೊಸದಾಗಿ ನಿರ್ಮಾಣ ಮಾಡಿರುವ ಎಂ.ಎನ್. ಗುರುಸ್ವಾಮಿ ಉಗ್ರಾಣ ಕಟ್ಟಡದ ಮುಂಭಾಗದಲ್ಲಿ ದಾವಣಗೆರೆ ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ಬಸವರಾಜಪ್ಪ, ಶ್ರೀ ವಿರುಪಾಕ್ಷಪ್ಪ, ಜಿಲ್ಲಾ ಪಂಚಾಯತ್ ಅಧ್ಯಕ್ಷರು ಶ್ರೀ ಜಿ. ದ್ಯಾಮಪ್ಪ, ಹರಿಹರ ಶಾಸಕರು ಡಾ|| ವೈ. ನಾಗಪ್ಪ, ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಮತ್ತು ಶ್ರೀ ಕೆ.ಬಿ. ರಾಮಲಿಂಗಪ್ಪ ಇವರುಗಳನ್ನು ಚಿತ್ರದಲ್ಲಿ ನೋಡಬಹುದು.

# ಜಿಲ್ಲಾ ವಾರ್ತೆಗಳು



ರಾಜ್ಯ ವಸತಿ ಸಚಿವರು ಶ್ರೀ ಸಿ.ಆರ್. ಸಗೀರ್ ಅಹಮದ್‌ರವರು ಶ್ರೀ ಎಂ.ಎನ್. ಷಡಕ್ಷರಿಯವರಿಗೆ "ಪರಿಸರ ಸಂರಕ್ಷಣೆ" ಪ್ರಶಸ್ತಿ ಪ್ರದಾನ ಮಾಡಿದರು.

## ಚಿಕ್ಕಮಗಳೂರು ಜಿಲ್ಲೆ

ಚಿಕ್ಕಮಗಳೂರು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಂ.ಎನ್. ಷಡಕ್ಷರಿಯವರಿಗೆ "ಪರಿಸರ ಸಂರಕ್ಷಣೆ" ಯಲ್ಲಿ ಅವರ ಗಣನೀಯ ಸೇವೆಯನ್ನು ಗುರುತಿಸಿ 2002ನೇ ಸಾಲಿನ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ ನೀಡಲಾಯಿತು.

ತಾರೀಖು 1.11.2002ರಂದು ಜಿಲ್ಲಾ ಮೈದಾನದಲ್ಲಿ ನಡೆದ ಸಾರ್ವಜನಿಕ ಸಮಾರಂಭದಲ್ಲಿ ರಾಜ್ಯ ವಸತಿ ಸಚಿವ ಶ್ರೀ ಸಿ.ಆರ್. ಸಗೀರ್ ಅಹಮದ್ ಪ್ರಶಸ್ತಿ ಪ್ರದಾನ ಮಾಡಿದರು. ಜಿಲ್ಲಾ ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷ ಡಾ|| ಜೆ.ಪಿ. ಕೃಷ್ಣೇಗೌಡ, ಜಿಲ್ಲಾಧಿಕಾರಿ ಶ್ರೀ ಶ್ರೀನಿವಾಸ್, ಜಿಲ್ಲಾಪಂಚಾಯತಿ ಅಧ್ಯಕ್ಷ ಶ್ರೀ ಟಿ.ಡಿ. ರಾಜೇಗೌಡ, ಸಿ.ಡಿ.ಎ. ಅಧ್ಯಕ್ಷ ಶ್ರೀ ಮೂರ್ತಿ ಮತ್ತು ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯದರ್ಶಿ ಶ್ರೀ ಕೆಂಚಪ್ಪ ಉಪಸ್ಥಿತರಿದ್ದರು.

## ಬೆಂಗಳೂರು ದಕ್ಷಿಣ ಜಿಲ್ಲೆ

ದಿನಾಂಕ 21-10-2002 ರಿಂದ 30-10-2002ರ ವರೆಗೆ ಬೆಸೆಂಟ್ ಪಾರ್ಕಿನಲ್ಲಿ ಸ್ಕೌಟ್ ಶಿಕ್ಷಕ, ಗೈಡ್ ಶಿಕ್ಷಕಿಯರ ಮೂಲ ತರಬೇತಿ ಶಿಬಿರಗಳು ಮತ್ತು ಸ್ಕೌಟ್ ಶಿಕ್ಷಕರ ಮುಂದುವರೆದ ತರಬೇತಿ ಶಿಬಿರವು ನಡೆಯಿತು. ಸ್ಕೌಟ್ ವಿಭಾಗದಲ್ಲಿ 40 ಮಂದಿ ಗೈಡ್ ವಿಭಾಗದಲ್ಲಿ 30 ಮಂದಿ ಶಿಬಿರಾರ್ಥಿಗಳು ಇದ್ದರು. ಶ್ರೀ ಜೆ. ಚಕ್ರವರ್ತಿ, ಶ್ರೀ ಟಿ.ಕೆ. ನಾರಾಯಣಸ್ವಾಮಿ, ಶ್ರೀಮತಿ ಛಾಯ, ಸಿಸ್ಟರ್ ಲಿಡಿಯಾ ಇವರುಗಳು ವಿವಿಧ ತರಬೇತಿಗಳ ನಾಯಕತ್ವ ವಹಿಸಿದ್ದರು.

## ಬೆಂಗಳೂರು ಗ್ರಾಮಾಂತರ ಜಿಲ್ಲೆ

ದಿನಾಂಕ 27-10-2002 ರಂದು ರಾಜ್ಯ ಕೇಂದ್ರ ಕಛೇರಿಯಲ್ಲಿ ಸ್ಕೌಟ್ ಶಿಕ್ಷಕರಿಗೆ ಅಧ್ಯಯನ ವೃತ್ತ ಏರ್ಪಡಿಸಲಾಗಿತ್ತು. 74 ಮಂದಿ ಇದರಲ್ಲಿ ಭಾಗವಹಿಸಿದ್ದರು. ಶೈಕ್ಷಣಿಕ ಅಧ್ಯಯನದ ಪ್ರಶ್ನೆಗಳ ಬಗ್ಗೆ

ಸಲಹೆ ಸೂಚನೆಗಳನ್ನು ನೀಡಲಾಯಿತು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎನ್. ಶ್ರೀನಿವಾಸನ್ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎ.ಎಸ್. ಶಿವನಂಜಪ್ಪ ಇವರುಗಳು ಸೂಕ್ತ ಸೂಚನೆ ನೀಡಿದರು. ರಾಜ್ಯ ತರಬೇತಿ ಆಯುಕ್ತರಾದ ಶ್ರೀ ನಾರಾಯಣ್ಣ ಶೆಟ್ಟಿ ಕೇಂದ್ರ ಸ್ಥಾನೀಯ ಆಯುಕ್ತರಾದ ಶ್ರೀ ಎಮ್.ಎ. ಚಲ್ಲಯ್ಯರವರು ಶಿಕ್ಷಕರಿಗೆ ಸೂಕ್ತ ಮಾರ್ಗದರ್ಶನ ನೀಡಿದರು.

## ಕೋಲಾರ ದಕ್ಷಿಣ ಜಿಲ್ಲೆ

ದಿನಾಂದ 20-10-2002 ರಿಂದ 29-10-2002ರ ವರೆಗೆ ಬೆಸೆಂಟ್ ಪಾರ್ಕಿನಲ್ಲಿ ಸ್ಕೌಟ್ ಶಿಕ್ಷಕ ಗೈಡ್ ಶಿಕ್ಷಕಿಯರ ಮೂಲ ತರಬೇತಿ ಶಿಬಿರಗಳು ನಡೆದವು. ಸ್ಕೌಟ್ ವಿಭಾಗದಲ್ಲಿ 32 ಮಂದಿ ಮತ್ತು ಗೈಡ್ ವಿಭಾಗದಲ್ಲಿ 12 ಮಂದಿ ಶಿಬಿರಾರ್ಥಿಗಳಿದ್ದರು. ಶ್ರೀ ಡಿ. ಬಸವರಾಜ್, ಶ್ರೀ ಮಾಧವಸಿಂಗ್, ಶ್ರೀಮತಿ ಸುಶೀಲಗೋಪಾಲ್ ಇವರುಗಳು ವಿವಿಧ ಶಿಬಿರಗಳ ನಾಯಕತ್ವ ವಹಿಸಿದ್ದರು.

## ಬಿಜಾಪುರ ಜಿಲ್ಲೆ

ದಿನಾಂಕ 22-09-2002 ರಂದು ಬಸವನಬಾಗೇವಾಡಿ ತಾಲ್ಲೂಕಿನ ನಿಡಗುಂದಿಯಲ್ಲಿ ನಡೆದ ಸರ್ವರೋಗ ತಪಾಸಣೆ ಶಿಬಿರದಲ್ಲಿ ನಿಡಗುಂದಿಯ ಸ್ವಾಮಿ ವಿವೇಕಾನಂದ ಸ್ಕೌಟ್‌ಗಳು ಕೆ.ಜಿ.ಎಸ್. ಶಾಲೆಯ ಗೈಡ್‌ಗಳು ಹಾಗೂ ಸ್ಕೌಟ್ ಮಾಸ್ಟರ್ ಗೈಡ್ ಕ್ಯಾಪ್ಟನ್‌ಗಳು ಸ್ವಯಂ ಸೇವಕರಾಗಿ ಭಾಗವಹಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ದಿನಾಂಕ 29.10.2002 ರಂದು ಮುದ್ದೇಬಿಹಾಳ ಸ್ಥಳೀಯ ಸಂಸ್ಥೆ ವತಿಯಿಂದ ಶಾಲಾ ಕಾಲೇಜುಗಳ ಮುಖ್ಯಸ್ಥರಿಗೆ ಹಾಗೂ ಬಿ.ಆರ್.ಸಿ., ಸಿ.ಆರ್.ಸಿ., ಸಮನ್ವಯಾಧಿಕಾರಿಗಳಿಗೆ ಒಂದು ದಿನದ ಸ್ಕೌಟ್, ಗೈಡ್ ಜ್ಞಾನ ಶಿಬಿರವನ್ನು ಏರ್ಪಡಿಸಲಾಗಿತ್ತು.

ಶ್ರೀ ಎ.ಕೆ. ಮುಲ್ಲಾ, ಶ್ರೀ ಎಸ್.ಎಸ್. ಪಾಟೀಲ್, ಶ್ರೀ ಬಿ.ಎಸ್. ಪಾಟೀಲ್, ಶ್ರೀ ಎನ್.ಎಂ. ಲಿಂಗದಳ್ಳಿ, ಶ್ರೀ ಸಿ.ಬಿ. ಮೇಗೇರಿ ಬಿ.ಇ.ಓ., ಶ್ರೀಮತಿ ಸರೋಜಿನಿ ಪಾಟೀಲ್ ಡಾ|| ಎಂ.ಆರ್. ನಾಡಗೌಡ್ರ. ಶ್ರೀ ಎಸ್.ಎಸ್. ಹುಗಾರ್, ಶ್ರೀ ರಾಮನಗೌಡ ಪಾತರೆಡ್ಡಿ ಮತ್ತು ಶ್ರೀ ಎಸ್.ಎಸ್. ದೇಶ್‌ಮುಚ್ ಉಪಸ್ಥಿತರಿದ್ದರು.

ದಿನಾಂಕ 30.10.2002 ರಂದು ವಿಜಾಪುರ ಗ್ರಾಮೀಣ ವಲಯುದ ಆಶ್ರಯುದಲ್ಲಿ ಶಾಲಾ ಕಾಲೇಜುಗಳ ಮುಖ್ಯಸ್ಥರುಗಳಿಗೆ ಬಿ.ಆರ್.ಸಿ., ಸಿ.ಆರ್.ಸಿ., ಸಮನ್ವಯಾಧಿಕಾರಿಗಳಿಗೆ ಒಂದು ದಿನದ ಸ್ಕೌಟ್ ಗೈಡ್ ಜ್ಞಾನ ಶಿಬಿರವನ್ನು ಏರ್ಪಡಿಸಲಾಗಿತ್ತು. ಶ್ರೀ ಆರ್. ಕಣ್ಣೂರ ಬಿ.ಈ.ಓ., ಶ್ರೀ ವಿ.ಆರ್. ದೇವಗಿರಿ, ಶ್ರೀ ಸಿದ್ದಣ್ಣ ಸಕ್ರಿ, ಶ್ರೀಮತಿ ಭಾಗ್ಯಶ್ರೀ ಸಿಂದಗೀಕರ್, ಶ್ರೀ ಚವ್ಹಾಣ್ ಇವರುಗಳು ಉಪಸ್ಥಿತರಿದ್ದರು.

ದಿನಾಂಕ 30.10.2002 ರಂದು ಬಸವನ ಬಾಗೇವಾಡಿ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ಶಾಲಾ ಕಾಲೇಜು ಮುಖ್ಯಸ್ಥರುಗಳಿಗೆ ಬಿ.ಆರ್.ಸಿ., ಸಿ.ಆರ್.ಸಿ., ಸಮನ್ವಯಾಧಿಕಾರಿಗಳಿಗೆ ಒಂದು ದಿನದ ಸ್ಕೌಟ್ಸ್, ಗೈಡ್ ಜ್ಞಾನ ಶಿಬಿರವನ್ನು ಏರ್ಪಡಿಸಲಾಗಿತ್ತು. ಶ್ರೀ ಗುರುಸಂಗನ ಬಸವದೇವರು ವಿರಕ್ತಮಠ, ಶ್ರೀ ಅಶೋಕ ಕಲ್ಲೂರ, ಶ್ರೀ ಎಂ.ಎಚ್. ದೊಣ್ಣೂರು, ಶ್ರೀ ಎನ್.ಎಚ್. ನಾಡೂರ, ಶ್ರೀ ಐ.ಎಫ್. ಅರಳಿಮಟ್ಟಿ, ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಉಪಸ್ಥಿತರಿದ್ದರು. ಮೇಲ್ಕಂಡ ಎಲ್ಲಾ ಕಾರ್ಯಕ್ರಮುಗಳನ್ನು ಶ್ರೀ ಚಿನ್ನಸ್ವಾಮಿ ರೆಡ್ಡಿ ಎಲ್.ಟಿ.(ಎಸ್) ರಾಜ್ಯ ಕಾರ್ಯದರ್ಶಿ,

ಶ್ರೀ ಎಸ್.ಎಸ್. ನಿಂಬಾಳ್ ಜಿಲ್ಲಾ ಕಾರ್ಯದರ್ಶಿ ಬಿಜಾಪುರ, ಶ್ರೀಮತಿ ನಿರ್ಮಲಾ ಕಲಾಶೆಟ್ಟಿ ಎ.ಎಸ್.ಓ.ಸಿ.(ಜಿ), ಶ್ರೀ ಕುಂಬಾರ ಡಿ.ಒ.ಸಿ.(ಎಸ್) ನೆರವೇರಿಸಿದರು.

ಶ್ರೀ ಬಿ.ಎಸ್. ಪಾಟೀಲ್ ಶಿಬಿರದ ಉದ್ಘಾಟನೆ ನೆರವೇರಿಸಿದರು. ಶ್ರೀ ಬಿ.ವಿ. ರಾಮರೆಡ್ಡಿ, ಶ್ರೀ ಬಿರಾದರ್, ಸಾರ್ವಜನಿಕ ಶಿಕ್ಷಣ ಇಲಾಖೆ ಉಪ ನಿರ್ದೇಶಕರಾದ ಶ್ರೀ ಅಬ್ದುಲ್ ವಾಜಿದ್ ಮುಂತಾದವರು ಸಮಾರಂಭದಲ್ಲಿ ಉಪಸ್ಥಿತರಿದ್ದರು.




**ಮೂಲ ತರಬೇತಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಸಂಸ್ಥೆಯ ಅಧ್ಯಕ್ಷರೂ ಆದ ಡಾ|| ಎನ್. ನಾಗಾಂಬಿಕಾದೇವಿ ಮಾತನಾಡುತ್ತಿರುವುದು.**

ದಿನಾಂಕ 29 ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ಸಂಸ್ಥೆಯ ಅಧ್ಯಕ್ಷರು ಹಾಗೂ ಜಿಲ್ಲಾ ಅಧಿಕಾರಿಗಳಾದ ಡಾ|| ಎನ್. ನಾಗಾಂಬಿಕಾ ದೇವಿ, ಉಪನಿರ್ದೇಶಕರಾದ ಶ್ರೀ ಅಬ್ದುಲ್ ವಾಜಿದ್, ಬಿರಾದರ್ ಇವರುಗಳು ಉಪಸ್ಥಿತರಿದ್ದರು. ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿ ಗಳಾದ ಶ್ರೀ ಎಸ್. ರವಿ ಅವರು ಭವ್ಯ ಶಿಬಿರಾಗ್ನಿಗೆ ಅತಿಥಿಗಳಾಗಿ ಭಾಗವಹಿಸಿದ್ದರು.

## ಕೊಪ್ಪಳ ಜಿಲ್ಲೆ

ದಿನಾಂದ 20-09-2002 ರಿಂದ 29-09-2002ರ ವರೆಗೆ ಜಿಲ್ಲಾ ಮಟ್ಟದ ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸಲಾಗಿತ್ತು. 38 ಮಂದಿ ಸ್ಕೌಟ್ ಶಿಕ್ಷಕ ತರಬೇತಿಯನ್ನು 12 ಮಂದಿ ಕಬ್ ಶಿಕ್ಷಕ ತರಬೇತಿಯನ್ನು ಪಡೆದರು. ಶ್ರೀ ಪಿ. ಮಂಜುನಾಥಪ್ಪ ಇವರು ಸ್ಕೌಟ್ ವಿಭಾಗಕ್ಕೂ ಶ್ರೀ ಎಸ್.ಎಸ್. ಹುಸೇನಿ ಇವರು ಕಬ್ ವಿಭಾಗಕ್ಕೂ ನಾಯಕರಾಗಿದ್ದರು. ಹೇಮರೆಡ್ಡಿಮಲ್ಲಮ್ಮ ವಸತಿ ಶಾಲೆಯ ಮುಖ್ಯಸ್ಥರಾದ

## ಶಿವಮೊಗ್ಗ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ದಿನಾಂಕ : 04-10-2002 ರಿಂದ 06-10-2002ರ ವರೆಗೆ ಜಿಲ್ಲಾ ಸ್ಕೌಟ್ ಭವನ ಆವರಣದಲ್ಲಿ ಪೆಟ್ರೋಲ್ ಲೀಡರ್ಸ್ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ತರಬೇತಿಯಲ್ಲಿ ಕಬ್ಸ್ ಮತ್ತು ಬುಲ್-ಬುಲ್ಸ್ 40, ಸ್ಕೌಟ್ಸ್ - 40, ಗೈಡ್ಸ್ - 60 ಒಟ್ಟು 150 ಮಕ್ಕಳು ಭಾಗವಹಿಸಿದ್ದರು.

ಸ್ಕೌಟ್ಸ್ ಗೈಡ್ಸ್ ಮಕ್ಕಳಿಗೆ ಪ್ರವೇಶ ಮತ್ತು ಪ್ರಥಮ ಸೋಪಾನದ ವಿಷಯಗಳ ಬಗ್ಗೆ ತರಬೇತಿಯನ್ನು ಕೊಡಲಾಯಿತು. ಹಾಗೂ ಪೆಟ್ರೋಲ್ ಲೀಡರ್ಸ್‌ಗಳ ಜವಾಬ್ದಾರಿಯ ಬಗ್ಗೆ ಮಾಹಿತಿಯನ್ನು ಕೊಡಲಾಯಿತು. ಈ ಶಿಬರದ ಉದ್ಘಾಟನೆಯನ್ನು ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಪ್ರೊಫೆಸರ್ ಎ.ಎಸ್. ಚಂದ್ರಶೇಖರ್‌ರವರು ನೆರವೇರಿಸಿದರು. ದಿನಾಂಕ : 06-10-2002 ರಂದು ಸಮಾರೋಪ ಸಮಾರಂಭಕ್ಕೆ ಅಧ್ಯಕ್ಷರಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿರವರು ಭಾಗವಹಿಸಿದ್ದರು. ಮುಖ್ಯ ಅತಿಥಿಯಾಗಿ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಭಾರತೀ ಚಂದ್ರಶೇಖರ್‌ರವರು ಭಾಗವಹಿಸಿದ್ದರು. ಶ್ರೀ ಎಂ.ಜಿ. ಶಿವಕುಮಾರ್ ಎ.ಎಲ್.ಟಿ.(ಎಸ್) ರವರು ಕಾರ್ಯಕ್ರಮವನ್ನು ಸಂಘಟಿಸಿದರು.

ಈ ತರಬೇತಿಯನ್ನು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಯಾದ ವೈ.ಆರ್. ವೀರೇಶಪ್ಪ ಮತ್ತು ಸಹ ಕಾರ್ಯದರ್ಶಿಯಾದ ಡಿ.ಎನ್. ನೂರ್ ಅಹಮದ್‌ರವರು ಭಾಗವಹಿಸಿದ್ದರು.

## ಬೀದರ್ ಜಿಲ್ಲೆ



**ಸಮಾಜ ಸೇವಾ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು**

ದಿನಾಂದ : 28.10.2002 ರಿಂದ 1-11-2002ರ ವರೆಗೆ ಬೀದರ್ ನಗರದ ಹೊರ ವಲಯದಲ್ಲಿರುವ ಪ್ರತಿಷ್ಠಿತ ಸಂಸ್ಥೆಯ ಮಿಲೆನಿಯಂ ಪಬ್ಲಿಕ್ ಸ್ಕೂಲ್‌ನ ವಿಶಾಲವಾದ ಪ್ರಕೃತಿ ದತ್ತವಾದ ಪರಿಸರದಲ್ಲಿ ಸಮುದಾಯ ಸೇವೆ ಮತ್ತು ಪಟಾಲಂ ನಾಯಕರ ತರಬೇತಿ ಯಶಸ್ವಿಯಾಗಿ ಜರುಗಿತು. ಜಿಲ್ಲೆಯ ವಿವಿಧ ಶಾಲೆಗಳಿಂದ ಒಟ್ಟು 300 ಸ್ಕೌಟ್, ಗೈಡ್ಸ್ ಮಕ್ಕಳು ಭಾಗವಹಿಸಿದ್ದರು.

## ಕೊಡಗು ಜಿಲ್ಲೆ



ಸೋಮವಾರ ಪೇಟೆ ತಾಲೂಕು ಸ್ಥಳೀಯ ಸಂಸ್ಥೆಯವರು ಕೊಳಚಿ ಪ್ರೇದಶದಲ್ಲಿರುವ ಅಂಗನವಾಡಿ ಕೇಂದ್ರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಸಮುದಾಯ ಚಟುವಟಿಕೆ ಮಾಡಿಸಿ ಸಿಹಿ ಹಂಚುತ್ತಿವುದು.

## ಹಾಸನ ಜಿಲ್ಲೆ

**ಮೈಸೂರು ವಿಭಾಗ ಮಟ್ಟದ ಸ್ಕೌಟ್ಸ್ - ಗೈಡ್ಸ್ ಮಾಹಿತಿ ಶಿಬಿರ**

ಮೈಸೂರು ವಿಭಾಗದ ಕ್ಷೇತ್ರ ಶಿಕ್ಷಣಾಧಿಕಾರಿ ಗಳಿಗೆ ಹಾಗೂ ತಾಲೂಕು ಶಿಕ್ಷಣ ಸಂಯೋಜಕರುಗಳಿಗೆ ಸ್ಕೌಟ್ಸ್ - ಗೈಡ್ಸ್ ಮಾಹಿತಿ ಶಿಬಿರವನ್ನು ಜಿಲ್ಲಾ ಸ್ಕೌಟ್ಸ್ - ಗೈಡ್ಸ್ ಭವನ, ಹಾಸನ ಇಲ್ಲಿ ಸಂಘಟಿಸಲಾಯಿತು.

ಶಿಬಿರದ ಉದ್ಘಾಟನೆಯು ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಯು.ಎಸ್. ಪರಮೇಶ್ವರ್‌ರವರ ಅಧ್ಯಕ್ಷತೆಯಲ್ಲಿ ಜರಗಿತು. ಶಿಬಿರದ ಸಮಾರೋಪ ಸಮಾರಂಭ ಚೆನ್ನರಾಯಪಟ್ಟಣ ತಾಲೂಕು ಕ್ಷೇತ್ರ ಶಿಕ್ಷಣಾಧಿಕಾರಿ ಎಸ್. ಜಯಕುಮಾರ್‌ರವರ ಅಧ್ಯಕ್ಷತೆಯಲ್ಲಿ ಜರುಗಿತು. ಸ್ಕೌಟ್ಸ್ - ಗೈಡ್ಸ್ ಚಳುವಳಿಯಲ್ಲಿ ವಿದ್ಯಾರ್ಥಿಗಳು ಸರ್ವತೋಮುಖ ಪ್ರಗತಿ ಶಿಕ್ಷಣದ ಉದ್ದೇಶವಾಗಿರುವುದರಿಂದ ಸ್ಕೌಟ್ಸ್ - ಗೈಡ್ಸ್ ಚಟುವಟಿಕೆಗಳನ್ನು ಶಾಲೆಗಳಲ್ಲಿ ನಡೆಸುವಲ್ಲಿ ಎಲ್ಲರೂ ಪ್ರೋತ್ಸಾಹ ನೀಡಬೇಕೆಂದು ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ತಿಳಿಸಿದರು. ಜಿಲ್ಲಾ ಕಾರ್ಯದರ್ಶಿ ಎ.ವಿ. ರಮೇಶ್ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಯಂ. ಪ್ರಭಾಕರ ಭಟ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಹಾಸನ, ಕೊಗ್ಗಗಾಣಿಗ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಉಡುಪಿ ಇವರುಗಳು ಸ್ಕೌಟ್ಸ್ - ಗೈಡ್ಸ್ ಚಳುವಳಿಯ ಬಗ್ಗೆ ಮಾಹಿತಿ ನೀಡಿದರು.

ಮೈಸೂರು ವಿಭಾಗದ ಉಡುಪಿ, ದಕ್ಷಿಣ ಕನ್ನಡ, ಚಿಕ್ಕಮಗಳೂರು, ಹಾಸನ, ಮೈಸೂರು, ಮಂಡ್ಯ, ಚಾಮರಾಜನಗರ, ಕೊಡಗು ಜಿಲ್ಲೆಗಳಿಂದ 37 ಸಾರ್ವಜನಿಕ ಶಿಕ್ಷಣ ಇಲಾಖೆ ಅಧಿಕಾರಿಗಳು ಹಾಗೂ ಸಂಯೋಜಕರುಗಳು ಭಾಗವಹಿಸಿದ್ದರು.

## ಮಂಡ್ಯ ಜಿಲ್ಲೆ

ವಿಶ್ವಮಾನವ ಕ್ಷೇತ್ರ (ಸಾತನೂರು) ದಲ್ಲಿ ಸಾರ್ವಜನಿಕ ಶಿಕ್ಷಣ ಸಂಸ್ಥೆ ಹಾಗೂ ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್ ಇವರ ಸಂಯೋಗದಲ್ಲಿ ಮೂರು ದಿನದ ಅಕ್ಟೋಬರ್ 26 ರಿಂದ 28ರ ವರೆಗೆ "ಜಿಲ್ಲಾ ಮಟ್ಟದ ಪ್ರೌಢ ಶಾಲಾ ವಿಜ್ಞಾನ ವಸ್ತು ಪ್ರದರ್ಶ" ವನ್ನು ಆಯೋಜಿಸಲಾಗಿತ್ತು.

ಇದೇ ವೇಳೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ 'ಜೈ ಹಿಂದ್ ಓಪನ್ ಸ್ಕೌಟ್ಸ್ ಗ್ರೂಪ್' ನ 14 ರೋವರ್ಸ್, 6 ಸ್ಕೌಟ್ಸ್ ಹಾಗೂ ಹೊಳಲು ಪ್ರೌಢ ಶಾಲೆಯ 4 ಗೈಡ್ಸ್, ಕಾರ್ಮೆಲ್ ಕಾನ್ವೆಂಟ್‌ನ ಒಂದು ಗೈಡ್ಸ್ ಮಕ್ಕಳುಗಳು ಜಯಲಕ್ಷ್ಮೀ ಗೌಡ ಎ.ಎಲ್.ಟಿ. (ಗೈಡ್) ಹಾಗೂ ರೋವರ್ ಸ್ಕೌಟ್ಸ್ ನಾಯಕ ಎನ್. ಅಶೋಕ ಕುಮಾರ್ ಅವರು ನೇತೃತ್ವದಲ್ಲಿ ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದ್ದಾರೆ.

ಕಾರ್ಯಕ್ರಮದ ಮುಕ್ತಾಯ ಸಮಾರಂಭದಲ್ಲಿ ವಸ್ತು ಪ್ರದರ್ಶನದ ಸಂಚಾಲಕ ಶಿವಶಂಕರರಾವ್ ಮಾತನಾಡುತ್ತಾ ಸ್ಕೌಟ್ಸ್ - ಗೈಡ್ಸ್ ಹಾಗೂ ರೋವರ್ಸ್‌ಗಳು ಸ್ವಯಂ ಪ್ರೇರಿತರಾಗಿ ಬಂದು, ಈ ಮೂರು ದಿನದ ವಸ್ತು ಪ್ರದರ್ಶನದಲ್ಲಿ ಕೆಲವೊಂದು ಜವಾಬ್ದಾರಿಗಳನ್ನು ವಹಿಸಿ ಉತ್ತಮ ಸೇವೆಯನ್ನು ಸಲ್ಲಿಸಿರುತ್ತಾರೆ ಎಂದು ಶ್ಲಾಘಿಸಿದರು.

ಇದೇ ಸಂದರ್ಭದಲ್ಲಿ ಕ್ಷೇತ್ರದ ಕಾರ್ಯದರ್ಶಿ ಶ್ರದ್ಧಾನಾಥ ಸ್ವಾಮಿಜಿ ಅವರು ಮಾತನಾಡುತ್ತಾ ಈ ಸ್ಕೌಟ್ಸ್ ಮಕ್ಕಳ ಸೇವೆ ಸಮಾಜಕ್ಕೆ ಹೀಗೆಯೇ ಮುಂದುವರೆಯಲಿ ಎಂದು ಶುಭಕೋರಿದರು.

**ಸ್ಕೌಟಿಂಗ್ / ಗೈಡಿಂಗ್ : ಒಂದು ಆಟ, ಶಿಕ್ಷಣ ಮತ್ತು ಸಾಧನೆ;**
**ಸ್ಕೌಟಿಂಗ್ / ಗೈಡಿಂಗ್ : ಬೇರೇನೂ ಅಲ್ಲ; ಒಂದು ಜೀವನ ವಿಧಾನ**
**ಸ್ಕೌಟಿಂಗ್ / ಗೈಡಿಂಗ್ : ಅದರ ಮಂತ್ರ ಸೇವೆ; ಸಹಬಾಳ್ವೆ;**
**ಸ್ಕೌಟಿಂಗ್ / ಗೈಡಿಂಗ್ : ಅದರ ವ್ಯಾಪ್ತಿ ಇಡೀ ಜಗತ್ತು.**

# ಮುಕ್ತದಳಗಳ ರಾಜ್ಯ ಮಟ್ಟದ ಪ್ರಥಮ ಕ್ಯಾಂಪುರಿ




**ರಾಜ್ಯ ಮಟ್ಟದ ಮುಕ್ತದಳಗಳ ಕ್ಯಾಂಪೋರಿಯಲ್ಲಿ ನೆನಪಿನ ಚೀಟಿಗಳನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಬಿಡುಗಡೆ ಮಾಡಿದರು. ಚಿತ್ರದಲ್ಲಿ ಶ್ರೀ ಆರ್. ವೆಂಕಣ್ಣ, ರಾಜ್ಯ ಉಪಾಧ್ಯಕ್ಷರು, ಶ್ರೀ ಆರ್.ಎಲ್. ಪಾಟೀಲ್, ಜಂಟಿ ನಿರ್ದೇಶಕರು, ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆ, ಶ್ರೀ ಜೆ. ರಾಜೇಂದ್ರನ್ ಪುರಸಭೆ ಅಧ್ಯಕ್ಷರು ದೊಡ್ಡಬಳ್ಳಾಪುರ ಮತ್ತು ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀ ಎಂ. ಶ್ರೀನಿವಾಸ್ ಕ್ಯಾಂಪೋರಿಯ ಸಂಚಾಲಕರು, ರಾಜ್ಯ ಮುಕ್ತದಳದ ಪರಿಷತ್ತು.**

ದಿನಾಂದ : 08-10-2002 ರಿಂದ 12-10-2002ರ ವರೆಗೆ ಬೆಸೆಂಟ್ ಪಾರ್ಕಿನಲ್ಲಿ ಮುಕ್ತದಳಗಳ ರಾಜ್ಯ ಮಟ್ಟದ ಕ್ಯಾಂಪುರಿ ನಡೆಯಿತು. ಜಾನಪದ ಮೇಳ, ಸಾಹಸ ಚಟುವಟಿಕೆಗಳು ಇರುಳಿನ ಸ್ಕೌಟಿಂಗ್, ರಸ ಪ್ರಶ್ನೆ, ಅಗ್ನಿ ಶಾಮಕ ಪ್ರದರ್ಶನ ಸಮುದಾಯ ಅಭಿವೃದ್ಧಿ, ಇವೇ ಮುಂತಾದ ಚಟುವಟಿಕೆಗಳು ಇದ್ದವು. ರಾಜ್ಯದ ವಿವಿಧ ಜಿಲ್ಲೆಗಳಿಂದ ಸುಮಾರು 300 ಮಂದಿ ಬಾಲಕ ಬಾಲಕಿಯರು ಭಾಗವಹಿಸಿದ್ದರು. ಮುಕ್ತದಳಗಳ ಒಂದು ಸಮಿತಿ ಕ್ಯಾಂಪುರಿಯನ್ನು ಸಂಘಟಿಸಿತು. 8-10-2002 ರಂದು ನಡೆದ ಸಮಾರಂಭದಲ್ಲಿ ದೊಡ್ಡಬಳ್ಳಾಪುರ ನಗರ ಸಭೆಯ ಅಧ್ಯಕ್ಷರಾದ ಶ್ರೀ ಜೆ. ರಾಜೇಂದ್ರರವರು ಮುಖ್ಯ ಅತಿಥಿಗಳಾಗಿದ್ದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪರವರು ಅಧ್ಯಕ್ಷತೆ ವಹಿಸಿದ್ದರು. ರಾಜ್ಯ ಆಯುಕ್ತರು (ಗೈಡ್ಸ್) ಶ್ರೀಮತಿ ಎಮ್.ಜಿ. ಬೋಪಯ್ಯ ಮತ್ತು ಯುವಜನ ಸೇವೆಯ ಜಂಟಿ ನಿರ್ದೇಶಕರಾದ ಶ್ರೀ ಆರ್.ಎಲ್. ಪಾಟೀಲ್ ಇವರುಗಳು ಸಭೆಯಲ್ಲಿ ಉಪಸ್ಥಿತರಿದ್ದರು ಜಾನಪದ ಮೇಳ, ಪರಂಪರೆ ಪ್ರದರ್ಶನ ಮತ್ತು ಭವ್ಯ ಶಿಭಿರಾಗ್ನಿ ಕಾರ್ಯಕ್ರಮಗಳಲ್ಲಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಚಿನ್ನಸ್ವಾಮಿ ರೆಡ್ಡಿ, ಪ್ರೊ|| ಎಂ. ಸೂರ್ಯನಾರಾಯಣಪ್ಪ, ರಾಜ್ಯ ಖಜಾಂಚಿ, ಶ್ರೀ ಕೆ. ತಿಮ್ಮಪ್ಪ, ಶ್ರೀ ನಾರಾಯಣ ಶೆಟ್ಟಿ, ಬೆಂಗಳೂರಿನ ಧಾನ್ಯ ವರ್ತಕರ ಸಂಸ್ಥೆಯ ಉಪಾಧ್ಯಕ್ಷರು ಶ್ರೀ ಬಿ.ಎಲ್.

ಶಂಕರಪ್ಪ, ರಾಜ್ಯ ಜಂಟಿ ಕಾರ್ಯದರ್ಶಿಗಳು (ಗೈಡ್ಸ್) ಆದ ಶ್ರೀಮತಿ ಎವ್. ಶಾಂತಿಮತಿ, ಜಿಲ್ಲಾ ಆಯುಕ್ತರು ಸ್ಕೌಟ್ ಶ್ರೀ ಪಳನಿ, ಶ್ರೀ ಶಾಮಸುಂದರ ಶರ್ಮ ಜಿಲ್ಲಾ ಮುಖ್ಯ ಆಯುಕ್ತರು ಇವರುಗಳು ಭಾಗವಹಿಸಿದ್ದರು.

ದಿನಾಂಕ 11-10-2002 ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರು ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಮತ್ತು ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌಟ್) ಆದ ಶ್ರೀ ಎ. ಶಿವಮಹದೇವನ್‌ವರು ಭಾಗವಹಿಸಿದರು.

ಶ್ರೀ ಚಾಮುಂಡಿ ಮುಕ್ತದಳದ, ಶ್ರೀ ಕೆ. ನರಸಿಂಹಮೂರ್ತಿ 15ನೇ ಕಂಠೀರವ ಮುಕ್ತದಳದ, ಶ್ರೀ ಎವ್. ಶ್ರೀನಿವಾಸ್ ಮತ್ತು ಶ್ರೀ ಆರ್.ಡಿ. ಮೂರ್ತಿ, ಯಶಸ್ವಿ ಮುಕ್ತದಳದ ಶ್ರೀ ಐ.ಎಸ್. ನಾಗರಾಜ್ ಗುಪ್ತ, ಭಗತ್ ಸಿಂಗ್ ಮುಕ್ತದಳದ ಶ್ರೀ ಎ.ಎನ್. ನರೇಂದ್ರಕುಮಾರ್, ಕೊಂಡಜ್ಜಿ ಬಸಪ್ಪ ಮುಕ್ತದಳದ ಶ್ರೀ ಪಿ.ಎನ್. ಕೃಷ್ಣಪ್ರಸಾದ್ ಮತ್ತು ಗಾಯಿತ್ರಿ ಮುಕ್ತದಳದ ಶ್ರೀ ಕೆ.ವಿ. ಸತ್ಯನಾರಾಯಣರಾವ್ ಇವರುಗಳು ಕ್ಯಾಂಪೂರಿ ಯಶಸ್ವಿಗೆ ಶ್ರಮಿಸಿದರು.




## GOVERNOR MADE SCOUT'S PATRON

***By Our Staff Reporter***

*Bangalore, Nov, 7. The Governor, T.N. Chaturvedi, took oath as Patron of Bharat Scouts and Guides, Karnataka, at the Raj Bhavan here today. Speaking at his investiture ceremony, M. Chaturvedi said the Government should encourage youth in rural areas to join Scouts and Guides. He would ask the Government to consider the request of Bharat Scouts and Guides, Karnataka, to increase the number of seats reserved in professional and technical courses in the State consistent with the increase in the number of eligible Presidential Scout/ Guide awardees. He also appealed to the MPs, and zilla and taluk panchayats in the State to support the activities of the Scouts and Guides. The Governor also released Foundation Day flags of Bharat Scouts and Guides and a brochure highlighting the aims and purpose of the movement in Karnataka.*



## 'ಸ್ಕೌಟ್ಸ್ , ಗೈಡ್ಸ್ ಅಭ್ಯರ್ಥಿಗಳಿಗೆ ಮೀಸಲು ಪ್ರಮಾಣ ಹೆಚ್ಚಿಸಿ'

ಬೆಂಗಳೂರು, ನಂ. 7 - ವೃತ್ತಿ ಶಿಕ್ಷಣ ಮತ್ತು ತಾಂತ್ರಿಕ ಕೋರ್ಸ್‌ಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಅಭ್ಯರ್ಥಿಗಳಿಗೆ ಮೀಸಲು ಪ್ರಮಾಣ ಹೆಚ್ಚಿಸಬೇಕು ಎಂದು ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿ ಸಲಹೆ ಮಾಡಿದ್ದಾರೆ.

ರಾಜಭವನದಲ್ಲಿ ಇಂದು ನಡೆದ ಸಮಾರಂಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಪೋಷಕರಾಗಿ ಗೌರವ ಹುದ್ದೆ ಸ್ವೀಕರಿಸಿ ಅವರು ಮಾತನಾಡುತ್ತಿದ್ದರು.

ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಹೆಚ್ಚುತ್ತಿರುವ ಅಭ್ಯರ್ಥಿಗಳಿಗೆ ಸಮಾನ ಮೀಸಲಾತಿ ಹೆಚ್ಚಿಸಬೇಕು ಎಂದು ಅಭಿಪ್ರಾಯಪಟ್ಟರು.

ಸ್ಥಳೀಯ ಪ್ರದೇಶಾಭಿವೃದ್ಧಿ ನಿಧಿ ಬಳಸಿ, ಸ್ಕೌಟ್ಸ್ ಮತ್ತು ಗೈಡ್ಸ್‌ನ ಪರಿಧಿಗೆ ಹೆಚ್ಚಿನ ಅಭ್ಯರ್ಥಿಗಳನ್ನು ಸೆಳೆಯುವ ಮೂಲಕ ಸಂಸದರು ಈ ಆಂದೋಲನದಲ್ಲಿ ಭಾಗವಹಿಸಬೇಕು ಎಂದೂ ಕರೆ ನೀಡಿದರು.

ಕರ್ನಾಟಕ ಘಟಕ 2005ನೇ ಸಾಲಿನ ವೇಳೆಗೆ ಒಟ್ಟು ನಾಲ್ಕು ಲಕ್ಷ ವಿದ್ಯಾರ್ಥಿಗಳನ್ನು ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಸೇರಿಸುವ ಗುರಿ ಹೊಂದಿರುವುದನ್ನು ಶ್ಲಾಘಿಸಿದರು. ಇದೇ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಉದ್ದೇಶ ವಿವರಿಸುವ ವಿವರಣಾ ಪತ್ರ ಬಿಡುಗಡೆ ಮಾಡಿದರು.

**ಪ್ರಜಾವಾಣಿ**

## ಸ್ಕೌಟ್ಸ್‌ನ ಮಹಾಪೋಷಕರಾಗಿ ರಾಜ್ಯಪಾಲರಿಂದ ಪ್ರಮಾಣ ವಚನ

ಬೆಂಗಳೂರು, ನಂ. 7 - ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯದ ಮಹಾಪೋಷಕರಾಗಿ ರಾಜ್ಯಪಾಲ ಶ್ರೀ ಟಿ.ಎನ್. ಚತುರ್ವೇದಿ ಅವರು ಇಂದು ಇಲ್ಲಿ ಪ್ರಮಾಣ ವಚನ ಸ್ವೀಕರಿಸಿದರು.

ರಾಜಭವನದಲ್ಲಿ ನಡೆದ ಸರಳ ಸಮಾರಂಭದಲ್ಲಿ ಪ್ರಮಾಣ ವಚನ ಸ್ವೀಕರಿಸಿದ ಅವರು, ನಂತರ ಸಂಸ್ಥಾಪನಾ ದಿನ ಧ್ವಜವನ್ನು ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಮಾತನಾಡಿದ ಅವರು, ತಾವು ಶಾಲಾ ವಿದ್ಯಾರ್ಥಿಯಾಗಿದ್ದಾಗ ಸ್ಕೌಟ್‌ನ ಚಟುವಟಿಕೆಯಲ್ಲಿ ಭಾಗವಹಿಸಿದ್ದನ್ನು ಸ್ಮರಿಸಿ, ಇಂದಿಗೂ ತಮಗೆ ಸ್ಕೌಟ್ ಮತ್ತು ಗೈಡ್ಸ್ ಬಗ್ಗೆ ಅಪಾರ ಗೌರವವಿದೆ ಎಂದರು.

ದೇಶದಲ್ಲಿ ಈ ಸಂಸ್ಥೆ ಅಪಾರ ಸೇವೆ ಸಲ್ಲಿಸಿದೆ, ಸಂಸ್ಥೆಯ ಕಾರ್ಯ ಚಟುವಟಿಕೆಗಳ ಬಗ್ಗೆ ಹಿಂದಿನಿಂದ ಇರುವ ಜನಪ್ರಿಯತೆ ಇಂದಿಗೂ ಮುಂದುವರೆದಿದೆ. ವಿದ್ಯಾರ್ಥಿಗಳಲ್ಲಿ ಶಿಸ್ತು ಮತ್ತು ಸೇವಾಮನೋಭಾವನೆ ಮೂಡಿಸುವಲ್ಲಿ ಈ ಸಂಸ್ಥೆ ಮಹತ್ತರ ಪಾತ್ರವಹಿಸಿದೆ ಎಂದು ಹೇಳಿದರು. ಈ ಸಂಸ್ಥೆಯ ಚಟುವಟಿಕೆಗಳಿಗೆ ಸರ್ಕಾರ ಮಾತ್ರವಲ್ಲದೇ, ಜಿಲ್ಲಾ ಪಂಚಾಯ್ತಿ, ಗ್ರಾಮಪಂಚಾಯ್ತಿ ಮುಂತಾದ ಸ್ಥಳೀಯ ಸಂಸ್ಥೆಗಳು ಎಲ್ಲಾ ರೀತಿಯ ಬೆಂಬಲ ನೀಡಬೇಕು. ಸಂಸ್ಥೆ ಇದುವರೆಗೆ ನಿರ್ವಹಿಸಿರುವ ಪಾತ್ರದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಬೆನ್ನು ತಟ್ಟುವ ಕೆಲಸ ಮಾಡಬೇಕು ಎಂದರು. ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತ ಕೊಂಡಜ್ಜಿ ಬಿ. ಷಣ್ಮುಖಪ್ಪ ಅವರು ಸ್ವಾಗತಿಸಿದರು.

**ಉದಯವಾಣಿ**



**100** **2007**

A Hundred years of Promise
in 2007, Scouting will celebrate its Centenary

**I think the Scouts/Guides are excellent material and the more they expand, the better for the Country**

- Jawaharlal Nehru

Regd as News Paper (Magazine) No : **CPMG/KA/BGW-549/2002**



ಕರ್ನಾಟಕ
ಸ್ಕೌಟ್ ಮತ್ತು ಗೈಡ್
KARNATAKA SCOUT & GUIDE
News Magazine

BOOK-POST

If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002

*Published for :* The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.